# ಕನ್ನಡ ನುಡಿ ಮತ್ತು ಪರಿಷತ್ಪತ್ರಿಕೆಗಳ ಸಲಹಾ ಸಮಿತಿ



ಸಂಪಾದಕರು

**ಆಸ್ಥಾನ ವಿದ್ವಾನ್ ಪಂಡಿತರತ್ನಂ ಬಿ. ಶಿವಮೂರ್ತಿ ಶಾಸ್ತ್ರಿಗಳು**

ಸಹ ಸಂಪಾದಕರು

**ಆಸ್ಥಾನ ವಿದ್ವಾನ್ ಎಂ. ಎಸ್. ಸುಬ್ರಹ್ಮಣ್ಯ ಶಾಸ್ತ್ರಿಗಳು**

## ವಿನಿಮಯ ಪತ್ರಿಕೆಗಳು

**ದಿನಪತ್ರಿಕೆ:**

(೧) ಜನವಾಣಿ-ಬೆಂಗಳೂರು. (೨) ಸಂಯುಕ್ತ ಕರ್ನಾಟಕ-ಹುಬ್ಬಳ್ಳಿ. (೩) ವಿಶಾಲಕರ್ಣಾಟಕ-ಹುಬ್ಬಳ್ಳಿ. (೪) ನವಯುಗ-ಹುಬ್ಬಳ್ಳಿ.

**ವಾರಪತ್ರಿಕೆ:**

(೧) ಪ್ರಜಾಮತ-ಬೆಂಗಳೂರು. (೨) ಚೇತನ-ಬೆಂಗಳೂರು. (೩) ಚಿತ್ರಗುಪ್ತ-ಬೆಂಗಳೂರು. (೪) ಮೈಸೂರು ಗೆಜೆಟ್-ಬೆಂಗಳೂರು. (೫) ರಾಯಭಾರಿ ಉಡುಪಿ. (೬) ವಿಕ್ರಮ-ಬೆಂಗಳೂರು. (೭) ಕಂಠೀರವ-ಮಂಗಳೂರು. (೮) ಪ್ರಭಾತ-ಮಂಗಳೂರು. (೯) ನವಭಾರತ-ಮಂಗಳೂರು. (೧೦) ವಿಚಾರವಾಣಿ-ಮಂಗಳೂರು. (೧೧) ಕರ್ನಾಟಕ ವೈಭವ-ಬಿಜಾಪುರ. (೧೨) ಸಂದೇಶ-ಬೆಳಗಾಂವಿ. (೧೩) ನವಸಂದೇಶ-ಬಳ್ಳಾರಿ. (೧೪) ರೈತ-ಬಳ್ಳಾರಿ. (೧೫) ಕರ್ಮವೀರ-ಹುಬ್ಬಳ್ಳಿ. (೧೬) ಜಯ್‌ಹಿಂದ್-ಹುಬ್ಬಳ್ಳಿ. (೧೭) ಬೆಳಕು-ಮೈಸೂರು. (೧೮) ನವಯುಗ-ಉಡುಪಿ. (೧೯) ಜನಪ್ರಗತಿ-ಬೆಂಗಳೂರು. (೨೦) ಕಾನಡಾವೃತ್ತ-ಕುಮಟ. (೨೧) ರಾಷ್ಟ್ರಮತ-ಮಂಗಳೂರು. (೨೨) ನಾಗರಿಕ-ಕುಮಟ. (೨೩) ಪ್ರಜಾ-ಹೈದರಾಬಾದು. (೨೪) ಕನ್ನಡಿಗ-ಹುಬ್ಬಳ್ಳಿ. (೨೫) ಚಲಚಿತ್ರ-ಬೆಂಗಳೂರು. (೨೬) ಪ್ರಪಂಚ-ಹುಬ್ಬಳ್ಳಿ. (೨೭) ಸುದರ್ಶನ-ಉಡುಪಿ. (೨೮) ಜನಸೇವಕಾ-ಅಂಕೋಲಾ. (೨೯) ಸಾಧನಾ-ಭಾಗ್ಯನಗರ. (೩೦) American Reporter. (೩೧) New York Times-New York.

**Fortnightly :**—British Information Service, Fortnightly Review of News and Events, Delhi. (2) Sree Bharathee, Hyderabad. (3) Soviet Land.

(ರಕ್ಷಾಪತ್ರದ ಮೂರನೆಯ ಪುಟಕ್ಕೆ ಮುಂದುವರಿದಿದೆ)

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

**HALF-YEARLY JOURNAL OF THE**

# KANNADA SAHITYA PARISHAT

**BANGALORE 2**



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು ೨

೯೫[illegible]

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

## ದುರ್ಮುಖಿ—ಜ್ಯೇಷ್ಠ-ಮಾರ್ಗಶಿರ

**ಸಂಪುಟ ೪೧]** **ಜೂನ್—ಡಿಸೆಂಬರ್ ೧೯೫೬** **[ಸಂಚಿಕೆ ೧-೨**

## ವಿಷಯ ಸೂಚಿಕೆ

# HALF-YEARLY JOURNAL

## OF THE

## KANNADA LITERARY ACADEMY, BANGALORE

Vol. 41] JUNE—DECEMBER 1956 [Nos. 1-2

## CONTENTS

# ಆರ್ಯರ ಆಗಮನಕ್ಕೆ ಮೊದಲು ದಕ್ಷಿಣ ದ್ರಾವಿಡರ ನಾಟಕ ಕಲೆ

(ಒಂದು ಊಹೆ)

**ಶ್ರೀ ವೈ. ಅಚ್ಯುತರಾವ್, ಎಂ.ಎ.**

ಪಾಶ್ಚಾತ್ಯ ಐತಿಹಾಸಿಕರ ಆಧಾರದಮೇಲೆ ನಾವು ಆರ್ಯರು ದಕ್ಷಿಣ ದೇಶಕ್ಕೆ ಬಂದದ್ದು ಈಗ್ಗೆ ಎರಡುಸಾವಿರ ವರ್ಷಗಳ ಕಾಲಕ್ಕೆ ಮುಂಚೆ ಎಂದೂ ಅದಕ್ಕೆ ಹಿಂದಿನ ದೆಲ್ಲಾ ದ್ರಾವಿಡ ಸಂಸ್ಕೃತಿ ಎಂದೂ ತಿಳಿದು ಈ ವಿಷಯವನ್ನು ಚರ್ಚಿಸಲಾಗಿದೆ.

ಆರ್ಯರು ಬರುವುದಕ್ಕೆ ಮೊದಲು ದ್ರಾವಿಡರು ಬಹು ನಾಗರೀಕರಾಗಿದ್ದರೆಂದೂ ಅವರು ಗ್ರೀಸ್, ಈಜಿಪ್ಟ್, ಪರ್ಷಿಯಾ ಮೊದಲಾದ ದೇಶಗಳೊಡನೆ ಸಂಪರ್ಕ ಬೆಳಸಿದ್ದ ರೆಂದೂ ಪಂಡಿತರು ನಿರ್ಧರಿಸಿದ್ದಾರೆ. ಸುಸಂಸ್ಕೃತರಾಗಿದ್ದ ದ್ರಾವಿಡರಲ್ಲಿ ಸಾಹಿತ್ಯವೂ ಬೆಳೆದು ತನ್ನದೇ ಆದ ಒಂದು ವೈಶಿಷ್ಟ್ಯವನ್ನು ಇಂದಿಗೂ ಇಟ್ಟುಕೊಂಡಿದೆಯೆಂದೂ ಎಲ್ಲ ರಿಗೂ ತಿಳಿದ ಅಂಶವೇ ಆಗಿದೆ. ಹೀಗಿದ್ದರೆ ನಾಟ್ಯ ಕಲೆಯೂ ದ್ರಾವಿಡರಲ್ಲಿದ್ದಿತೆ, ಇದ್ದಿದ್ದರೆ ಅದು ಹೇಗೆ ಇದ್ದಿತು, ಸುಸಂಸ್ಕೃತರಾಗಿದ್ದ ಆರ್ಯರು ದ್ರಾವಿಡರಿಂದ ನಾಟ್ಯ ಕಲೆಯನ್ನು ತೆಗೆದುಕೊಂಡರೆ ಅಥವಾ ಆರ್ಯರು ಬಂದಮೇಲೆಯೇ ದ್ರಾವಿಡರಿಗೆ ನಾಟ್ಯಕಲೆಯು ಬಂದಿತೇ ಎಂಬುದನ್ನು ನಾವು ಯೋಚಿಸಿದರೆ ಅನೇಕ ಆಧಾರಗಳಮೇಲೆ ದ್ರಾವಿಡರಲ್ಲಿ ನಾಟ್ಯಕಲೆ ಇದ್ದಿತೆಂದೂ ಅದು ಇನ್ನೂ ಹೆಚ್ಚು ಬೆಳೆಯದೆ ಅಲ್ಲಿಗೇ ನಿಂತು ಆರ್ಯರ ಸಂಸ್ಕೃತದ ಹೊಡೆತದಲ್ಲಿ ಎಲ್ಲವೂ ಕಲೆತುಹೋಗಿ ಹಳೆಯದು ಹೊಸದರಲ್ಲಿ ಬೆರೆತು, ಸಂಸ್ಕೃತವೆಂಬ ಸಾಗರದ ಅಲೆಗಳ ಹೊಡೆತಕ್ಕೆ ಸಿಕ್ಕಿ ಕಲೆತುಹೋದ ಯಮುನೆಯ ನೀರಿನಂತೆ ಐಕ್ಯವಾಗಿ ಹೋಯಿತು.

ಯಾವ ಜನಾಂಗದಲ್ಲಿಯೇ ಆಗಲಿ ನಾಟಕಕ್ಕೆ ಮೂಲವೆಂದರೆ ಆ ಜನರು ತಾವು ಭಕ್ತಿಯಿಂದಲೋ ಹೆದರಿಕೆಯಿಂದಲೋ ಪೂಜಿಸುತ್ತಿದ್ದ, ಗೀತೆಗಳನ್ನು ಹಾಡಿಕೊಂಡು ಕುಣಿಯುತ್ತಿದ್ದ ಭಾವವ್ಯಂಜಕವಾದ ನೃತ್ಯಗಳೇ ಕಾರಣವೆಂದೂ ಪಾಶ್ಚಾತ್ಯ ಪಂಡಿತರೂ ನಮ್ಮ ಪಂಡಿತರೂ ಒಪ್ಪುತ್ತಾರೆ. ಗ್ರೀಕ್ ನಾಟಕಕ್ಕೂ ಇದೇ ಆದಿ. ಇನ್ನು ಸಂಸ್ಕೃತ ನಾಟಕಕ್ಕೂ ಇದೇ ಆದಿಯಾಗಿರಬೇಕು. ಪ್ರಪಂಚದಲ್ಲಿ ಇವೆರಡನ್ನು ಬಿಟ್ಟು ಅಷ್ಟು ಹಿಂದಿನ ಕಾಲದಿಂದ ಹೆಸರೊತ್ತಿದ್ದ ನಾಟಕಗಳು ಮತ್ತೆ ಯಾವ ಭಾಷೆಯಲ್ಲೂ ಇಲ್ಲ. ಆದುದರಿಂದ ಗ್ರೀಕ್ ನಾಟಕಕ್ಕೆ ಆದಿಯಾಗಿದ್ದಂತೆ ಹಳೆಯ ಕುಣಿತಗಳೇ ಸಂಸ್ಕೃತ ನಾಟಕಕ್ಕೂ ಆದಿಯಾಗಿರಬೇಕು. ಒಮ್ಮೆಲೇ ಸಂಸ್ಕೃತ ನಾಟಕವು ಭರತನು ಬರೆದ ಶಾಸ್ತ್ರೀಯ ನಾಟಕದಂತೆ ಉದ್ಭವಿಸಿಲ್ಲ. ಭಾಸ ಕಾಳಿದಾಸಾದಿ ಕವಿಗಳ ನಾಟಕಗಳು ಒಮ್ಮೆಲೇ ಅನುಭವವೂ ತಳಹದಿಯೂ ಇಲ್ಲದೆ ಅಷ್ಟು ಪ್ರೌಢಾವಸ್ಥೆಗೆ ಬಂದಿಲ್ಲವೆಂದು ಎಲ್ಲರೂ ಒಪ್ಪುವ ಮಾತಾಗಿದೆ. ಈ ತಳಹದಿಯು ಯಾವುದೆಂದು ಸ್ವಲ್ಪ ಯೋಚಿಸಿ ನೋಡಿದರೆ ಅದು ದ್ರಾವಿಡ ಮೂಲವೆಂದೇ ಕಂಡುಬಂದೀತು. ದ್ರಾವಿಡರ ಸಂಸ್ಕೃತಿ ಇರುವುದು ಹೆಚ್ಚು ದಕ್ಷಿಣ ದೇಶದಲ್ಲಿ. ಉತ್ತರ ದೇಶದಲ್ಲಿ ಆರ್ಯರ ಸಂಸ್ಕೃತಿ ಹೆಚ್ಚು.

ಈ ಸಂಸ್ಕೃತಿಗಳು ಹೆಚ್ಚಾಗಿ ನಮಗೆ ಹಳ್ಳಿ ಜನರಲ್ಲಿಯೂ ಪಾಶ್ಚಾತ್ಯರ ಸಂಪರ್ಕ ಬಹು ಕಡಿಮೆಯಾಗಿರುವ ಪ್ರದೇಶದಲ್ಲಿಯೂ ಕಂಡುಬರಬೇಕು. ಇದರಿಂದಲೇ ಎರಡರ ಗುಣಾವ ಗುಣಗಳನ್ನು ನಿರ್ಧರಿಸಬೇಕು. ಹಳೆಯ ಸಂಪ್ರದಾಯಗಳು ಹಳ್ಳಿಗಳಲ್ಲಿ ಇರುವಷ್ಟು ಪಟ್ಟಣಗಳಲ್ಲಿ ಇಲ್ಲ. ಹಳ್ಳಿಯ ಕುಣಿತಗಳನ್ನು ನೋಡಿದರೆ ಉತ್ತರ ದೇಶಕ್ಕೂ ದಕ್ಷಿಣ ದೇಶಕ್ಕೂ ಸಂಬಂಧವೇ ಇಲ್ಲದಂತೆ ಇದೆ.

ಉತ್ತರ ದೇಶದಲ್ಲಿ ಆಡುವ "ರಾಮಲೀಲ" ಎಂಬ ಗ್ರಾಮ್ಯ ಅಭಿನಯವೂ, ಬಂಗಾಳದಲ್ಲಿ ಸಾರ್ವಜನಿಕ ರಂಜನೆಗೆ ಆಡುವ "ಯಾತ್ರೆ" ಎಂಬ ಆಟಗಳೂ, ದಕ್ಷಿಣ ದೇಶದಲ್ಲಿ ಇರುವ "ಕೇಳಿಕೆ" "ಬಯಲಾಟ" "ಕಥಕ್‌ಕಳಿ" "ಯಕ್ಷಗಾನ" ದೃಶ್ಯಗಳೂ ಒಂದುಕ್ಕೊಂದಕ್ಕೆ ಸಾಮ್ಯವಿಲ್ಲದಂತೆ ಇವೆ. ಗ್ರೀಕ್ ನಾಟಕವು ಸಂಸ್ಕೃತಕ್ಕೆ ಆದಿಯಾದರೆ ಮೊದಲು ಗ್ರೀಕರು ಬಂದು ಆರ್ಯರೊಡನೆ ಕಲೆತುದು ವಾಯುವ್ಯ ದಿಕ್ಕಿನಿಂದ, ಪಂಜಾಬು, ಕಾಶ್ಮೀರಗಳಲ್ಲಿ, ಸುಸಂಸ್ಕೃತರಲ್ಲದ ಗ್ರಾಮ್ಯಜನರ ಆಟಗಳು ರಾಮಲೀಲವೆಂಬ ಒಂದು ರಾಮಾಯಣ ಕಥೆಯೇ ಹೊರತು ಬೇರೆ ಇಲ್ಲ. ಈ ರಾಮಲೀಲವೂ ನಮ್ಮ ಕೇಳಿಕೆಯಂತೆ ಇರುವುದಿಲ್ಲ. ಸಂಪೂರ್ಣ ರಾಮಾಯಣವನ್ನು ೨೦–೩೦ ದಿವಸಗಳಲ್ಲಿ ಓದುತ್ತಾರೆ. ಅನೇಕರು ಅನೇಕ ಪಾತ್ರಗಳನ್ನುವಹಿಸಿ ಆ ಪಾತ್ರಕ್ಕೆ ತಕ್ಕಂತೆ ಸಂಭಾಷಣೆ ನಡೆಸುತ್ತಾರೆ. ಸ್ಫುರದ್ರೂಪಿಗಳಾದ ಇಬ್ಬರು ಶ್ರೀಮಂತ ಮಕ್ಕಳಿಗೆ ರಾಮಲಕ್ಷ್ಮಣರ ಪಾತ್ರಗಳನ್ನು ಕೊಟ್ಟು ಕೂಡಿಸುತ್ತಾರೆ. ರಾವಣನು ರಾಮನಿಗೆ ಸುಮಾರು ೧೦೦ ಗಜದ ದೂರದಲ್ಲಿ ಮಂಡಿಸಿರುತ್ತಾನೆ. ರಂಗಸ್ಥಳಗಳೂ ಸಮಯಕ್ಕೆ ತಕ್ಕಂತೆ ಪ್ರತಿದಿನವೂ ಬದಲಾಯಿಸುತ್ತದೆ. ಸಮುದ್ರತೀರ ಬೇಕಾದರೆ ಅಂದಿನ ಕಥೆಯು ಊರ ಕೆರೆಯ ಮುಂದೆ ನಡೆಯುತ್ತದೆ. ಊರಿನವರೆಲ್ಲರೂ ಅಲ್ಲಿಗೆ ಹೋಗುತ್ತಾರೆ. ಪ್ರೇಕ್ಷಕರಲ್ಲಿ ರಾಮನ ಕಡೆಯವರೆಂದೂ ರಾವಣನ ಕಡೆಯವರೆಂದೂ ಭಾಗ ಮಾಡಿಕೊಳ್ಳುತ್ತಾರೆ. ವಾಗ್ವಾದಗಳೆಲ್ಲಾ ಹೆಚ್ಚಾಗಿ ತುಳಸೀದಾಸ್ ರಾಮಾಯಣದ ಕಥಾ ಭಾಗಗಳಾಗಿರುತ್ತವೆ. ಕೊನೆಯಲ್ಲಿ ರಾವಣ ಸಂಹಾರವಾದಮೇಲೆ ಊರಿನವರೆಲ್ಲರೂ ಸಂತೋಷದಿಂದ ರಾಮಲಕ್ಷ್ಮಣ ಸೀತೆಯರನ್ನು ಅಯೋಧ್ಯಾಪುರಿಯಾದ ತಮ್ಮ ಊರಿನೊಳಕ್ಕೆ ಬರಮಾಡಿಕೊಳ್ಳುತ್ತಾರೆ. ಈ ರಾಮಲೀಲಾ ಆಟಗಳು ೧೬ನೇ ಶತಮಾನದಿಂದೀಚಿನವೆಂದೂ ತುಳಸೀದಾಸ್ ರಾಮಾಯಣದ ಆಧಾರದಮೇಲೆ ನಡೆಯುವುದೆಂದೂ, ಆರ್. ಕೆ. ಯಾಗ್ನಿಕರು ಅಭಿಪ್ರಾಯಪಡುತ್ತಾರೆ.

ಬಂಗಾಳದೇಶದ ಯಾತ್ರೆ ಎಂಬುದು ಕೇವಲ ವೈಷ್ಣವರು ಕೃಷ್ಣನ ಲೀಲೆಗಳನ್ನು ತೋರಿಸಲು ಹಬ್ಬದ ದಿವಸಗಳಲ್ಲಿಯೂ ಅಥವಾ ಅನೇಕರು ಒಟ್ಟು ಸೇರಿ ಊರಿಂದೂರಿಗೆ ಯಾತ್ರೆ ಹೊರಡುವಾಗ ಹಾಡಿಕೊಂಡೂ ಕುಣಿಯುತ್ತಲೂ ಹೋಗುವ ಮೆರವಣಿಗೆ. ಈ ಕೃಷ್ಣಲೀಲಾ ಕುಣಿತಗಳು ದೇವಸ್ಥಾನಗಳಲ್ಲೂ, ಅನೇಕ ಜನರು ಒಟ್ಟು ಸೇರಿ ತಮ್ಮ ತಮ್ಮ ಬೀದಿಗಳಲ್ಲೂ ಮಾಡುವುದುಂಟು. ಕಡೆಗೆ ಕೆಲವು ಮಂದಿ "ಯಾತ್ರಾವಾಲಾ" ಎಂಬುವರು ಊರಿಂದೂರಿಗೆ ಹೋಗಿ ಹಳ್ಳಿಗಳಲ್ಲಿ ರಾಧಾಕೃಷ್ಣರ ಪ್ರಣಯವನ್ನೂ ಅವರ ಜಗಳವನ್ನೂ ಆಡಿತೋರಿಸುತ್ತಾರೆ. ಲಲಿತ ಎಂಬ ಪಾತ್ರವು ಈ ಇಬ್ಬರಿಗೂ ಮಧ್ಯಸ್ಥಿಕೆ ಮಾಡುವುದನ್ನು ಹಾಡು ಕುಣಿತಗಳ ಮೂಲಕ ತೋರಿಸುತ್ತಾರೆ. ಈ ಯಾತ್ರೆ ಆಟಗಳ ಸ್ವರೂಪವನ್ನು ನೋಡಿದರೂ ಅವುಗಳಿಗೂ ನಮ್ಮ ಬಯಲಾಟಗಳಿಗೂ ಯಾವ ಸಂಬಂಧವಾದ

ಹೋಲಿಕೆಯೂ ಇರುವುದಿಲ್ಲ. ಸಂಸ್ಕೃತ ನಾಟಕಗಳ ರೀತಿಯೇ ಬೇರೆ. ಈ 'ಯಾತ್ರಾ'ಗಳ ರೀತಿಯೇ ಬೇರೆ. ಇವಕ್ಕೆಲ್ಲಾ ರಂಗಸ್ಥಳವಿಲ್ಲ, ಪರದೆ ಇಲ್ಲ—ಇತ್ಯಾದಿ. ಬಂಗಾಳದ ಈ ಯಾತ್ರೆಗಳು ೧೯ನೇ ಶತಮಾನದಿಂದ ಈಚೆಗೆ ಪಾಶ್ಚಾತ್ಯ ರಂಗಸ್ಥಳದ ಛಾಯೆಯಿಂದ ತುಂಬಿ ನಾಟಕ ರೂಪಕ್ಕೆ ಬಂದಿವೆ. ಆದರೆ ಅದರ ಮೂಲ ನಮಗೆ ಮುಖ್ಯವೇ ಹೊರತು ಕೃಷ್ಣಕಮಲ ಗೋಸ್ವಾಮಿಯವರಿಂದ ನವೀನತೆಯನ್ನುಪಡೆದ ಈಗಿನ ಬಂಗಾಳಿ 'ಯಾತ್ರೆ'ಗಳಲ್ಲ.

ಪಂಜಾಬು ದೇಶದ ಜನರಲ್ಲಿ, "ಗೋಪೀಚಂದ್" "ಪುರಾಣ" ಮತ್ತು "ಹಕೀಕತ್" ಎಂಬ ಆಟಗಳು ಹೆಚ್ಚಾಗಿ ಪ್ರಚಾರದಲ್ಲಿವೆ. ಇವುಗಳಲ್ಲಿ ವೀರ ರಸವೂ ಶೃಂಗಾರ ರಸವೂ ಇರುತ್ತವೆ. ಕಥಾ ಭಾಗವು, ಪ್ರಪಂಚ ಮಿಥ್ಯವೆಂದು ಎಲ್ಲವನ್ನೂ ಬಿಟ್ಟು ಬಿಡೋಣ, ವೀರನ ಯಾವುದಾದರೂ ಒಂದು ಸಾಹಸಕಾರ್ಯ, ಮುಂತಾದವು ಇರುತ್ತವೆ. ಜನರು ಎರಡು ಪಂಗಡದವರಾಗಿ ಮನೆಯ ಮಹಡಿಗಳ ಮೇಲೆ ಎದುರುಬದುರು ಕೂತು ಕೊಂಡು ಹಾಡುಗಳ ಮೂಲಕ ತಮ್ಮ ಸಂಭಾಷಣೆಯನ್ನು ನಡೆಸುತ್ತಾರೆ. ಈ ತರದ ಆಟಗಳು ಹೆಚ್ಚಾಗಿ ಹೆಂಗಸರ ಬಳಕೆಯಲ್ಲಿವೆ. ಆರ್ಯಸಂಸ್ಕೃತಿಯ ಬೀಜವು ಇರತಕ್ಕ ಉತ್ತರ ಹಿಂದೂಸ್ಥಾನದ ಜನಪದ ಆಟಗಳ ಪರಿಚಯು ಈಗ ಕೊಂಚಮಟ್ಟಿಗೆ ಆದಂತೆ ಆಯಿತು. ಇನ್ನು ದ್ರಾವಿಡರ ಮೂಲಸ್ಥಾನವಾದ ದಕ್ಷಿಣ ದೇಶದ ಕೆಲವು ಆಟಗಳನ್ನು ನೋಡೋಣ.

ಇಲ್ಲಿ ಆಟಗಳ ಕಥೆಗಳೂ ಹೆಚ್ಚಾಗಿ ಪೌರಾಣಿಕ ವಸ್ತುಗಳಾಗಿವೆ. ಇದಕ್ಕೆ ಕಾರಣ ಆರ್ಯರ ಸಂಪರ್ಕದಿಂದ ಅವರ ಮತವೇ ಎಷ್ಟರಮಟ್ಟಿಗೆ ದ್ರಾವಿಡರಲ್ಲಿ ರಕ್ತಗತವಾಗಿದೆ ಎಂಬುದೊಂದೇ. ಆದರೂ ಈ ಆರ್ಯ ಪುರಾಣ ಕಥೆಗಳನ್ನೂ ಆಡುವ ವಿಧಾನ ಉತ್ತರ ದೇಶದ 'ರಾಮಲೀಲ', 'ಯಾತ್ರ', "ರಸಧಾರಿ" "ಹಕೀಕತ್" ಅಟಗಳಂತೆ ಅಲ್ಲ. ದಕ್ಷಿಣದ ಆಟಗಳೆಲ್ಲಾ ಒಂದು ರಾತ್ರಿ ಪ್ರಾರಂಭವಾಗಿ ಅದೇ ರಾತ್ರಿಯೇ ಮುಗಿಯ ತಕ್ಕವು. ಊರಿನವರೆಲ್ಲರೂ ಸೇರಿ ಹಾಡುವುದು, ಕುಣಿಯುವುದು ಇಲ್ಲ. ಅವರು ಪ್ರೇಕ್ಷಕರು ಮಾತ್ರ. ರಂಗಸ್ಥಳದ ಮೇಲೆ ಬಂದು ಆಡುವವರು ಬೇರೆ. ಪಾತ್ರಗಳು ಕುಣಿಯುವುದೂ ಹಾಡುವುದೂ ಉತ್ತರ ದೇಶದ ರೀತಿಯಲ್ಲಿಲ್ಲ. ಭರತನ ನಾಟ್ಯಶಾಸ್ತ್ರದ ಕುಣಿತಕ್ಕೂ "ಧೊಂ ತದ್ಧಿತ"ಗಳ ಕುಣಿತಕ್ಕೂ ಇರುವ ಸಂಬಂಧವು ಪಂಡಿತರ ಸೂಕ್ಷ್ಮ ದೃಷ್ಟಿಗೂ ಅಗೋಚರವಿರಲಾರದು. ಈ ಕುಣಿತಗಳಲ್ಲಿ ಹೆಚ್ಚು ಪರಿಶ್ರಮ ಉಳ್ಳವರು ಈ ಭೇದವನ್ನು ತೋರಿಸಿಕೊಡಬೇಕು. ಮುಖವಾಡಗಳು, ಕಿರೀಟ, ಭುಜಕೀರ್ತಿಗಳ ಉಪಯೋಗವು ಉತ್ತರ ದೇಶಕ್ಕಿಂತ ದಕ್ಷಿಣದಲ್ಲಿ ಹೆಚ್ಚು. ರಂಗಸ್ಥಳದ ಮೇಲೆ ಪಾತ್ರಗಳು ಮಾತ್ರ ಸಂಭಾಷಣೆ ಮಾಡುತ್ತವೆ. ಪ್ರೇಕ್ಷಕರಾಗಲಿ ಒಂದೇ ಊರಿನವರಾಗಲಿ ಎರಡು ಪಂಗಡಗಳಾಗಿ ಸಂಭಾಷಣೆ ಮಾಡುವುದಿಲ್ಲ. ಮಂಗಳೂರು ಪ್ರಾಂತದ ಯಕ್ಷಗಾನವು ಪಂಜಾಬಿನ 'ಪುರಾಣ' ಅಥವಾ 'ಹಕೀಕತ್' ಆಟಗಳನ್ನು ಸ್ವಲ್ಪ ಹೋಲುತ್ತದೆ. ಬಹುಶಃ ಬಹು ಹಿಂದಿನ ಕಾಲದಿಂದ ಬಂದು ನೆಲಸಿದ ಸಾರಸ್ವತರು ಅಂದರೆ ಸರಸ್ವತೀ ನದಿಯ ತೀರದ ಜನರು ಇದಕ್ಕೆ ಮೂಲ ಪುರುಷರಿರಬಹುದು. ಯಕ್ಷಗಾನವೆಂಬ ಹೆಸರೂ ಆರ್ಯರ ಹೆಸರಾಗಿದೆ. ಈ ಯಕ್ಷಗಾನಗಳು ದ್ರಾವಿಡರ ಇತರ ಪ್ರಾಂತಗಳಲ್ಲಿ ಹೆಚ್ಚು ಪ್ರಚಾರದಲ್ಲಿಲ್ಲ. ಮಲಬಾರಿನ "ಕಥಕಳಿ" ಕುಣಿತವೂ ಅದರ ವೈಶಿಷ್ಟ್ಯವೂ

ಎಲ್ಲರಿಗೂ ತಿಳಿದೇ ಇದೆ. ಇದು ಹೆಚ್ಚಾಗಿ ಗ್ರೀಕರ ಮುಖವಾಡ ಕುಣಿತಗಳನ್ನು ಹೋಲುತ್ತದೆ. ತೆಲುಗರಲ್ಲಿಯೂ ತಮಿಳರಲ್ಲಿಯೂ, ಕನ್ನಡಿಗರಲ್ಲಿಯೂ ಹೆಚ್ಚಾಗಿ ಜನಪದದಲ್ಲಿ ಪ್ರಚುರದಲ್ಲಿರುವ 'ಕೇಳಿಕೆ' 'ಬಯಲಾಟ'ಗಳನ್ನು ನೋಡಿದರೆ ಅವುಗಳಲ್ಲಿ ನಾಟಕೀಯತೆ ಇದೆ. ಅದು ಒರಟು ಇರಬಹುದು. ಸಾವಿರಾರು ವರ್ಷಗಳು ಉತ್ತೇಜನವಿಲ್ಲದೆ ಹಿಂದೆ ಬಿದ್ದು ಸಂಸ್ಕೃತದ ಹೊಡೆತಕ್ಕೆ ಸಿಕ್ಕಿದ ದ್ರಾವಿಡ ಕಲೆಯೆಲ್ಲಾ ಈಗ ಒರಟೇ ಆಗಿ ಕಾಣುವುದಿಲ್ಲವೆ! ಇದು ಹಾಗೆಯೇ ಸಂಸ್ಕೃತದ ನಾಟಕಗಳ ಮುಂದೆ ಒರಟು. ಗ್ರೀಕರ 'ಕೋರಸ್' ಮತ್ತು ಪಾತ್ರಗಳ ಸಂಭಾಷಣೆಯಂತೆ ಕೇಳಿಕೆಯಲ್ಲಿ ನೋಡಬಹುದು. ರಂಗಸ್ಥಳದ ಮೇಲೆ ಸದಾ ಹಾಡುತ್ತಿರುವ ೫-೬ ಮಂದಿಯೇ ಮೇಳದವರು ಅಥವಾ "ಕೋರಸ್". ಪ್ರೇಕ್ಷಕರಿಗೆ ಪಾತ್ರ ಪರಿಚಯ ಮಾಡಿಕೊಡುವುದು ಅವರ ಕರ್ತವ್ಯ. ಪಾತ್ರವು ಬಂದ ತಕ್ಷಣವೇ ತನ್ನ ಸ್ವಭಾವಕ್ಕನುಗುಣವಾಗಿ ಕುಣಿಯುವುದಕ್ಕೆ ಪ್ರಾರಂಭಿಸುತ್ತದೆ. ಪಾತ್ರವು ಹೀಗೆ ಕುಣಿಯುತ್ತಿದ್ದಾಗ ಮೇಳದ ಮುಖ್ಯಸ್ಥನು ಸಂಶಯವನ್ನು ಸೂಚಿಸುತ್ತಾ ಸಭಿಕರಿಗೆ ಕೇಳುವಂತೆ ಛಂದಸ್ಸಿನಿಂದ ಕೂಡಿದ ಮಾತುಗಳ ಸಂಭಾಷಣೆಯನ್ನು ಪಾತ್ರದೊಂದಿಗೆ ಪ್ರಾರಂಭಿಸುವನು. ಪಾತ್ರವು ಅದಕ್ಕೆ ಸಮಂಜಸವಾದ ಉತ್ತರವನ್ನು ಕೊಡುವುದು. ಹೀಗೆ ಬಂದೊಡನೆಯೆ (೧) ಕುಣಿತ, (೨) ಸ್ವತಃನಾಮ ನಿರ್ದೇಶ, (೩) ತನ್ನ ಉದ್ದೇಶ, ಈ ಮೂರು ಸಂಸ್ಕೃತ ನಾಟಕಗಳಲ್ಲಿಲ್ಲ. ಹೀಗೆ ರಂಗಸ್ಥಳದ ಮೇಲೆ ಮೇಳದವರಿಗೂ, ಪಾತ್ರಗಳಿಗೂ, ಪ್ರೇಕ್ಷಕರಿಗೂ ಮಧ್ಯಸ್ಥಗಾರನಂತೆ ಸಾರಥಿಯು ನಡೆದುಕೊಳ್ಳುತ್ತಾನೆ. ಇದನ್ನೂ ನಾವು ಗ್ರೀಕ್ ನಾಟಕಗಳಲ್ಲಿ ಮಾತ್ರ ನೋಡಬಹುದು. ಸಾರಥಿಯೇ ಇಲ್ಲಿ ಹಾಸ್ಯಗಾರನೂ ಆಗಿರುವನು. ಅವನು ವೇಷ ಹಾಕಿಕೊಂಡೂ ಬರುವುದುಂಟು. ಉತ್ತರ ದೇಶದ ಆಟಗಳಲ್ಲಿ ಈ ನಡುವಳಿಯಿಲ್ಲ. ಗ್ರೀಕರಿಂದ ದ್ರಾವಿಡರಿಗೆ ಈ ಪದ್ಧತಿ ಬಂದಿರಬಹುದೆಂದು ಕೆಲವರು ಅಭಿಪ್ರಾಯಪಡಬಹುದು. ದ್ರಾವಿಡರಿಗೂ ಗ್ರೀಕರಿಗೂ ಬಹಳ ಹಿಂದಿನಿಂದಲೂ ಪರಿಚಯವಿತ್ತೆಂದು ಎಲ್ಲರಿಗೂ ತಿಳಿದ ಅಂಶವೇ ಆಗಿದೆ. ಗ್ರೀಕರ ಒಂದು ನಾಟಕದಲ್ಲಿ ಕೆಲವು ಕನ್ನಡ ಮಾತುಗಳು ಸಿಕ್ಕಿವೆಯೆಂದು ಕೆಲವು ಪಂಡಿತರು ಹೇಳಿದ್ದಾರೆ. ಆ ನಾಟಕದ ಕಥಾವಸ್ತುವು ಗ್ರೀಕ್ ವಸ್ತುವಲ್ಲ. ರಂಗಭೂಮಿ ಪಶ್ಚಿಮ ಕಾರವಾರದವಾಗಿದೆ. ಬಹುಶಃ ಗ್ರೀಕ್ ನಾಟಕಗಾರನು ಇಲ್ಲಿ ಬಂದು ನಾಟಕವನ್ನು ನೋಡಿ ಅಲ್ಲಿ ತೋರಿಸಿರಬಹುದು. ಈಗ ಫ್ರೆಂಚ್ ಮುಂತಾದ ನಾಟಕ ವಸ್ತುವನ್ನು ನಮ್ಮ ರಂಗಸ್ಥಳಕ್ಕೆ ನಾವು ಮಾರ್ಪಡಿಸಿಕೊಂಡು ತೋರುವಂತೆ ಏಕಿರಬಾರದು? ಹಾಗಿದ್ದ ಪಕ್ಷದಲ್ಲಿ ದ್ರಾವಿಡರು ನಾಟ್ಯಕಲೆಯನ್ನು ಗ್ರೀಕರಿಂದ ಕಲಿತುಕೊಳ್ಳಲಿಲ್ಲವೆಂದೂ ದ್ರಾವಿಡರಲ್ಲೂ ಅದು ಮೊದಲು ಇದ್ದಿತೆಂದೂ ಅದನ್ನು ನೋಡಿ ಒಂದು ಕಥೆಯನ್ನು ತಮ್ಮ ರಂಗಸ್ಥಳದ ಮೇಲೆ ಆಡಿ ತೋರಿಸಿರಬಹುದೆಂದೂ ಊಹಿಸಬಹುದಾಗಿದೆ.

ಉತ್ತರ ದೇಶದ ಜನಪದದ ಆಟಗಳಲ್ಲಿ ಕಥಾಭಾಗವೆಲ್ಲವೂ ರಾಮಾಯಣ ಮಹಾಭಾರತಾದಿಗಳವೇ ಆಗಿರುತ್ತವೆ. ಸಾಮಾನ್ಯ ಜೀವನಕ್ಕೆ ಸಂಬಂಧಪಟ್ಟವು ಯಾವುದೂ ಇಲ್ಲ. ಹಾಗೆ ಇದ್ದವೂ ಈಚಿನವಾಗಿವೆ. ದಕ್ಷಿಣ ದೇಶದಲ್ಲಿ ಆಡಿತೋರಿಸುವ ಎರಡು ಕತೆಗಳು ಸಿಕ್ಕಿವೆ. ಇವುಗಳ ಕಾಲವು ಸರಿಯಾಗಿ ಗೊತ್ತಿಲ್ಲ. ಅದು ನಿರ್ಧರವಾದರೆ ಈ ಕೆಳಗೆ ಕೊಟ್ಟಿರುವ ಎರಡು ಕಥೆಗಳೂ ದ್ರಾವಿಡ ಸಂಪ್ರದಾಯಕ್ಕೆ ಹೆಚ್ಚು ಉಪಷ್ಟಂಭಕಗಳಾಗುತ್ತವೆ. ಒಂದು, ಕನ್ನಡಿಗರ ಕಥೆಯಾದ 'ಬಾಳಾಸಂಗ್ಯಾ' ಎಂಬುದು. ಇದು

ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಬಳಕೆಯಲ್ಲಿದೆ. ಮತ್ತೊಂದು ತಮಿಳರ ಬಹು ಪ್ರಸಿದ್ಧವಾದ ಹೃದಯ ಭೇದಕವಾದ "ನಳತಂಗೆ" ಎಂಬ ಒಂದು ಹಳೆಯ ಕಥೆ. ನಳತಂಗೆಯು ಒಬ್ಬ ಪತಿವ್ರತಾಸ್ತ್ರೀ. ಅವಳಿಗೆ ಏಳು ಜನ ಮಕ್ಕಳು. ವಿಧಿವಶದಿಂದ ಅವಳು ಒಬ್ಬ ಘಾತುಕನ ಕೈಗೆ ಸಿಕ್ಕಿಬಿದ್ದು ತನ್ನ ಏಳು ಜನ ಮಕ್ಕಳನ್ನೂ ಭಾವಿಗೆ ಹಾಕುವ ಪ್ರಸಂಗ ಬರುತ್ತದೆ. ಅಳುತ್ತಾ ಅವಳು ತನ್ನ ಹೊಟ್ಟೆಯ ದುಃಖವನ್ನು ಹಾಡಿನಲ್ಲಿ ಹೇಳಿ ಜನರಿಗೆ ತೋರೆಯಿಡುತ್ತಾಳೆ. ಪ್ರೇಕ್ಷಕರ ಕಣ್ಣುಗಳಲ್ಲೂ ನೀರು ಹರಿದು ಹೋಗುತ್ತದೆ. ಕಡೆಗೆ ಅವಳ ಮಕ್ಕಳೆಲ್ಲವನ್ನೂ ವಿಧಿಯು ಅವಳ ಕೈಗೆ ತಂದುಕೊಡುತ್ತಾನೆ. ಈ ತರದ ಹೃದಯ ವಿದ್ರಾವಕವಾದ, ದುಃಖಮಯವಾದ ನಾಟಕಗಳು, ಗ್ರೀಕರಲ್ಲಿ ಟ್ರಾಜೆಡಿ ಎಂದು ಹೇಳಿಸಿಕೊಳ್ಳುವ ಕಥೆಗಳು, ತಮಿಳರಲ್ಲಿ ಅನೇಕವಾಗಿವೆಯಂತೆ. ಈತರದ ಆಟಗಳನ್ನು ನೋಡಿ, ಆರ್. ಕೆ. ಯಾಗ್ನಿಕ್‌ರು ತಮ್ಮ "ಇಂಡಿಯನ್ ಥಿಯೇಟರ್" ಎಂಬ ಪುಸ್ತಕದಲ್ಲಿ ದ್ರಾವಿಡರು ಆರ್ಯರ ಪ್ರಭಾವದ ಪ್ರವಾಹದೊಳಗೆ ಸಿಕ್ಕಿ ಮುಳುಗಿಹೋಗಿದ್ದರೂ ತಮ್ಮ ವ್ಯಕ್ತಿತ್ವವನ್ನು ಬಿಡದೆ ಇಟ್ಟುಕೊಂಡಿದ್ದರೆಂದು ಹೇಳಿದ್ದಾರೆ. ೧೧ನೆಯ ಶತಮಾನದಲ್ಲಿ ಮೊದಲನೆಯ ರಾಜರಾಜ ಚೋಳನು ಒಂದು ಶಿವಾಲಯವನ್ನು ಕಟ್ಟಿಸಿ ಅದರಲ್ಲಿ ಒಂದು ನಾಟಕದ ಕೂಟವನ್ನು ಸೇರಿಸಿ ಪ್ರತಿವರ್ಷವೂ ಅವರು ಚೋಳರಾಜನ ಶೌರ್ಯಾದಿಗಳನ್ನು ಕುರಿತು ಆಟ ಪ್ರದರ್ಶನ ಮಾಡಬೇಕೆಂದು ಶಾಸನ ಮಾಡಿದನಂತೆ. ಕೆ. ಆರ್. ಪಿಷರೋತಿಯವರ "ಕೇರಳ-ಸ್ಟೇಜ್" ಎಂಬ ಲೇಖನದಲ್ಲಿ ಇನ್ನೂ ಅನೇಕ ದ್ರಾವಿಡ ರಂಗಸ್ಥಳಕ್ಕೆ ಸಂಬಂಧಪಟ್ಟ ವಿಷಯಗಳು ದೊರಕುತ್ತವೆ.

ಯಾವ ಕಲೆಗೇ ಆಗಲಿ ರಾಜಮನ್ನಣೆ ಬೇಕು. ಇಲ್ಲದಿದ್ದರೆ ಅದು ಬೆಳೆಯುವುದಿಲ್ಲ. ಗ್ರೀಕ್‌ದೇಶದಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವದ ಪ್ರಭಾವದಿಂದ ನಾಟಕ ಕಲೆ ಚೆನ್ನಾಗಿ ಬೆಳೆಯಿತು. ನಮ್ಮ ದೇಶದಲ್ಲಿ ರಾಜರ ನಿರಂಕುಶ ಪ್ರಭುತ್ವವಿದ್ದಿತು. ಜನರ ಮಾತಿಗೆ ಹೆಚ್ಚು ಗೌರವವಿರಲಿಲ್ಲ. ರಾಜಾಸ್ಥಾನಗಳಲ್ಲಿ ಸೇರಿಕೊಂಡಿದ್ದ ಸಂಸ್ಕೃತ ಪಂಡಿತರ ಮಾತು ಚೆನ್ನಾಗಿ ನಡೆಯುತ್ತಿತ್ತು. ಸಂಸ್ಕೃತಕ್ಕೆ ಬಹು ಗೌರವವಿತ್ತು. ಆದುದರಿಂದ ಸಂಸ್ಕೃತ ಬಂದಮೇಲೆ ದಕ್ಷಿಣದೇಶದಲ್ಲಿ ದ್ರಾವಿಡರ ನಾಟಕ ಕಲೆಯು ಕ್ರಮೇಣ ಕ್ಷೀಣಿಸಿಹೋಯಿತು.

ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ "ಸಂಸ್ಕೃತ ನಾಟಕ" ಎಂಬ ಪುಸ್ತಕದಲ್ಲಿ ಅಶ್ವಘೋಷನ ವಿಷಯವನ್ನು ಪ್ರಸ್ತಾಪಿಸುವಾಗ ದಕ್ಷಿಣ ಹಿಂದೂಸ್ಥಾನದ ಒಂದು ನಾಟಕ ಮಂಡಳಿಯು ಶೋಭವತೀ ರಾಜನ ಮುಂದೆ ಒಂದು ಬೌದ್ಧ ನಾಟಕವನ್ನು ಆಡಿದರೆಂದೂ ಅದರಲ್ಲಿ ಸೂತ್ರಧಾರನೇ ಬುದ್ಧನ ಪಾತ್ರವನ್ನುವಹಿಸಿದ್ದನೆಂದೂ ಹೇಳಿದೆ ಎಂದು ಸೂಚಿಸಿದ್ದಾರೆ. ಅಶ್ವಘೋಷನ ಕಾಲ ಸುಮಾರು ೧ನೇ ಶತಮಾನವೆಂದು ಇಟ್ಟುಕೊಂಡರೂ ಭರತನಾಟ್ಯ ಶಾಸ್ತ್ರ ಪ್ರಚುರವಾಗಿ ಜನರಮೇಲೆ ಅದರ ಪರಿಣಾಮವಾಗುವುದಕ್ಕೆ ಮೊದಲೇ ದಕ್ಷಿಣ ಹಿಂದೂಸ್ಥಾನದಲ್ಲಿ ಒಂದು ನಾಟಕಮಂಡಳಿ ಇತ್ತೆಂದು ತಿಳಿದುಬಂದಿರುವುದು ಮುಖ್ಯವಾದ ವಿಷಯ. ನಾಟಕಮಂಡಳಿಗಳು ತಯಾರಾಗಿ ನಾಟಕಕ್ಕೆ ಬೇಕಾದ ಸಲಕರಣಗಳನ್ನು ಏರ್ಪಡಿಸಿಕೊಂಡು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ಆಡಿ ತೋರಿಸಬೇಕಾದರೆ ಆ ಹೊತ್ತಿಗಾಗಲೇ ನಾಟಕ ಕಲೆಯು ಒಂದು ರೀತಿಯಲ್ಲಿ ಪ್ರಚುರದಲ್ಲಿದ್ದು ಜನರನ್ನು ಆಕರ್ಷಿಸುತ್ತಿದ್ದಿರಬೇಕು.

ಭಾಸಮಹಾಕವಿಯ ನಾಟಕಗಳಲ್ಲಿ, ಭರತಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಕೆಲವು ಶಾಸ್ತ್ರೀಯ ರೀತಿಗಳಿಗೆ, ವಿರುದ್ಧವಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಭಾಸಮಹಾಕವಿಯ ಕಾಲ ಸುಮಾರು ಮೂರನೆಯ ಶತಮಾನದ ಕೊನೆಯೆಂದು ಪಂಡಿತರ ಅಭಿಪ್ರಾಯ. ದೇಶ ಕೇರಳ. ದ್ರಾವಿಡ ಸಂಸ್ಕೃತಿ ಅಲ್ಲಿ ಆಗ ಹೆಚ್ಚು ಅಳಿದು ಹೋಗಿರಲಿಲ್ಲ. "ಭಾಸ ನಾಟಕಗಳಲ್ಲಿ ತಮಿಳು ನಾಟಕಗಳಲ್ಲಿ ರಂಗಾಧಿದೇವತೆಯಾಗಿದ್ದ ಬಲರಾಮನಿಗೆ ಪ್ರಾಶಸ್ತ್ಯವಿರುವುದರಿಂದಲೂ" ಎಂದು ಶ್ರೀಮಾನ್ ಕೃಷ್ಣಶಾಸ್ತ್ರಿಗಳು ತಮ್ಮ "ಸಂಸ್ಕೃತ ನಾಟಕ"ದಲ್ಲಿ ಹೇಳಿದ್ದಾರೆ. ಬಲರಾಮ ಎಂಬ ಶಬ್ದ ಆರ್ಯರದಿದ್ದಿರಬಹುದು. ತಮಿಳರ ನಾಟಕವೆಂದು ಹೇಳಿರುವುದರಿಂದ ಆಗ ಸಂಸ್ಕೃತ ನಾಟಕಕ್ಕೆ ವ್ಯತ್ಯಾಸವಾಗಿ ತಮಿಳರಲ್ಲಿ ಒಂದು ತರದ ನಾಟಕವಿದ್ದಿತೆಂದು ತಿಳಿದುಬರುತ್ತದೆ. ಭಾಸನ ನಾಟಕಗಳಲ್ಲಿ ಸಾಮಾಜಿಕ ವೃತ್ತಾಂತವು ಬರುತ್ತದೆ. ಸಂಸ್ಕೃತ ನಾಟಕದಲ್ಲಿ ಅಪರೂಪವೆನಿಸಿದ ಮೃಚ್ಛಕಟಿಕದ ಮೂಲವು "ಚಾರುದತ್ತ"ದಲ್ಲಿ ದೊರಕುತ್ತದೆ ಎಂದು ಶ್ರೀಮಾನ್ ಶಾಸ್ತ್ರಿಗಳು ಹೇಳುತ್ತಾರೆ. ಈ ಸನ್ನಿವೇಶಗಳು ಭಾಸಕವಿಗೆ ಆಗಿನ ಕೆಲದ್ರಾವಿಡ ನಾಟಕಗಳ ಪರಿಚಯದಿಂದ ಏಕೆ ಆಗಿರಬಾರದು? ರಾಮಾಯಣ ಭಾರತಾದಿ ಕತೆಗಳಲ್ಲಿ ಕವಿಯು ಮಾಡಿಕೊಂಡಿರುವ ಮಾರ್ಪಾಡು ಬಹು ರಮಣೀಯವಾಗಿರುವುದರಿಂದಲೂ, ಬಹು ಪ್ರಖ್ಯಾತವೂ ಪೂಜ್ಯವೂ ಆದ ಪುರಾಣಕಥೆಗಳನ್ನು ಹಾಗೆ ಬದಲಾಯಿಸಿ ಬರೆಯೋಣವೆಂದರೆ ಆಗಿನ ಕಾಲದಲ್ಲಿ ಭಾಸನಂತಹ ಪ್ರತಿಭಾಶಾಲಿಗಳಿಗೆ ಬೇರೆ ಯಾವುದೋ ಸಂಸ್ಕೃತಕ್ಕೆ ಸಂಬಂಧವಿಲ್ಲದ ಸಾಹಿತ್ಯ ಪರಿಣಾಮದಿಂದಿರಬೇಕು. ಗ್ರೀಕ್ ನಾಟಕಗಳ ಪರಿಣಾಮದಿಂದ ನಮ್ಮಲ್ಲಿ ಅಶ್ವತ್ಥಾಮನ್ ನಾಟಕವು ಹುಟ್ಟಲಿಲ್ಲವೆ. ಆರ್ಯ ವಸ್ತುವಿಗೆ ಗ್ರೀಕ್ ಉಡುಪು. ಹಾಗೆಯೇ ದ್ರಾವಿಡ ರಂಗಸ್ಥಳದಲ್ಲಿ ನೋಡಿದ ಕೆಲವು ಕಥೆಗಳಿಂದ ಪ್ರೇರಿತನಾದ ಭಾಸ ತನ್ನ ಸಂಸ್ಕೃತ ನಾಟಕಗಳನ್ನು ರಚಿಸಿದನೆಂದು ನಾವು ಊಹಿಸಿದರೆ ತಪ್ಪೇನೂ ಹೆಚ್ಚು ಆಗಲಾರದು.

ಭರತ ನಾಟ್ಯಶಾಸ್ತ್ರದಲ್ಲಿ ಭಾಷೆಗಳ ವಿಷಯವನ್ನು ಹೇಳುವಾಗ ದ್ರಾವಿಡ ಭಾಷೆಗಳನ್ನು ನೀಚಪಾತ್ರಗಳು ಮಾತನಾಡಬೇಕೆಂದು ಹೇಳುತ್ತಾನೆ. ಇದರಿಂದ ದ್ರಾವಿಡ ಭಾಷೆಗೆ ಆಗ ಸಂಸ್ಕೃತ ಪಂಡಿತರು ತೋರಿಸುತ್ತಿದ್ದ ಗೌರವವು ತಿಳಿಯುತ್ತದೆ. ಈಗ ಹೈದರಾಬಾದಿನಲ್ಲಿ ಅನೇಕ ಮುಸಲ್ಮಾನರು ಆಂಧ್ರ ಕರ್ಣಾಟಕ ಭಾಷೆಗಳನ್ನು ಆಡುವ ಜನರಿಗೆ ಹೆಚ್ಚು ಮರ್ಯಾದೆ ಕೊಡುವುದಿಲ್ಲ. ವಿಶ್ವವಿದ್ಯಾನಿಲಯಗಳಲ್ಲಿ ಇವಕ್ಕೆ ಸ್ಥಾನ ವಿದ್ದರೂ ಜನರಲ್ಲಿ ಇರುವ ಗೌರವ ಹೋಗಿಲ್ಲ. ಮುಸಲ್ಮಾನ ಹುಡುಗರು ಇದನ್ನು ಮಾತ ನಾಡಿದರೆ "ಬೋಯಿಕ ಸಬಾನ್" ಅಂದರೆ ಸೇವಕರ ಮಾತು ಎಂದು ಹೇಳುತ್ತಾರೆ. ತನ್ನ ಹುಟ್ಟಿನಲ್ಲಿ ಈ ಭಾಷೆಗಳನ್ನೂ ಸೇರಿಸಿಕೊಂಡಿರುವ ಉರ್ದು ಜನಾಂಗವು ಈ ಕಾಲ ದಲ್ಲಿಯೂ ಹೀಗಾಡಿದರೆ ಆ ಕಾಲದಲ್ಲಿ ದ್ರಾವಿಡ ನಾಟಕಗಳಿಗೂ ಅವರ ಕಲೆಗೂ ಮರ್ಯಾದೆ ಎಲ್ಲಿ? ದ್ರಾವಿಡ ನಾಟಕ ಕಲೆಯು ಕ್ರಮೇಣ ಹೀನಸ್ಥಿತಿಗೆ ಬರಲು ಸಂಸ್ಕೃತವೇ ಕಾರಣ ವಾಯಿತು.

ಆರ್ಯರು ಹಿಂದೂದೇಶಕ್ಕೆ ಬಂದು ಉತ್ತರದಲ್ಲಿ ನೆಲಸಿದರು. ಇದೇ ಆರ್ಯರ ಮತ್ತೊಂದು ಗುಂಪು ಜರ್ಮನಿ ಮುಂತಾದ ಐರೋಪ್ಯ ದೇಶಗಳಿಗೂ ಹೋಯಿತು. ಸಂಸ್ಕೃತ ನಾಟಕಗಳಿಗೂ ಇತರ ಆರ್ಯ ಜನಾಂಗಗಳ ನಾಟಕಗಳಿಗೂ ಸಾದೃಶ್ಯವಿದೆಯೇ?

ಇವೆರಡಕ್ಕೂ ಮೂಲವು ಆರ್ಯರ ಗುಂಪು ದೇಶಗಳಿಗೆಲ್ಲಾ ಹರಡುವುದಕ್ಕೆ ಮೊದಲು ಇದ್ದ ಯಾವುದಾದರೂ ನೃತ್ಯ, ಹಬ್ಬ, ಮುಂತಾದುವೇ ಎಂದು ಪ್ರಶ್ನೆಯನ್ನು ಹಾಕಿದರೆ ಉತ್ತರವು ಸಮಂಜಸವಾಗಿ ಬರುವುದಿಲ್ಲ. ಸಂಸ್ಕೃತ ನಾಟಕಗಳಿಗೆ ಮೂಲವು ಗ್ರೀಕರ ನಾಟಕಗಳೋ, ದ್ರಾವಿಡರ ನಾಟಕಗಳೋ, ಮತ್ತೇನಾದರೂ ಇದೆಯೋ ಎಂಬ ಸಂಶಯವು ಇನ್ನೂ ಇದ್ದೇ ಇದೆ. ಶ್ರೀಮಾನ್ ಕೃಷ್ಣಶಾಸ್ತ್ರಿಗಳು ತಮ್ಮ "ಸಂಸ್ಕೃತ ನಾಟಕ"ದಲ್ಲಿ 'ಸಂಸ್ಕೃತ ನಾಟಕಗಳನ್ನು ಹಿಂದೆ ಹೇಗೆ ಪ್ರಯೋಗಿಸುತ್ತಿದ್ದರೋ ಗೊತ್ತಾಗುವುದಿಲ್ಲ; ಆದರೆ ಸಂಸ್ಕೃತ ನಾಟ್ಯದ ಛಾಯೆಗಳಾಗಿ ಈಗ ಉಳಿದಿರುವ 'ಬಯಲಾಟ' 'ತೆರಕ್ಕೂಟ' 'ವೀಥಿನಾಟಕ' ಗಳಂತೆ ಇರಬಹು"ದೆಂದು ಸಂಶಯಪಡುತ್ತಾರೆ. ಆರ್ಯರ ಸಂಸ್ಕೃತಿಗೆ ಮೂಲಸ್ಥಾನವೂ, ಉತ್ತೇಜನಕ್ಕೆ ಕೇಂದ್ರವೂ ಆದ ಉತ್ತರ ಹಿಂದೂಸ್ಥಾನದಲ್ಲಿ ಸಂಸ್ಕೃತ ನಾಟಕಗಳ ಛಾಯೆಯು ಪೂರ ಅಳಿಸಿ ಹೋಗಿ ದ್ರಾವಿಡ ದೇಶದ ಕನ್ನಡ, ತೆಲುಗು, ತಮಿಳು ಗಳಲ್ಲಿಯೇ ಛಾಯೆ ನಿಲ್ಲುತ್ತದೆಯೆ? ಹೆಚ್ಚು ಸಂಭವವಿಲ್ಲ. ಅದೇ ಪುಸ್ತಕದ ೪೭ನೇ ಪುಟದಲ್ಲಿ ಮತ್ತೆ ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಸಂಸ್ಕೃತ ನಾಟಕಕ್ಕೆ ದ್ರಾವಿಡ ನಾಟಕಗಳೇ ಮೂಲವಿರಬಹುದೇ ಎಂಬ ಮತ್ತೊಂದು ಸಂಶಯವನ್ನು ಚರ್ಚಿಸುತ್ತಾ ಮೇಲೆಹೇಳಿದ ಬಯಲಾಟ ಮುಂತಾದುವು ಈ ಮೂಲವಿರಬಹುದೇ ಎಂದು ಕೇಳುತ್ತಾರೆ. ಅಲ್ಲದೆ ದ್ರಾವಿಡರ ಸ್ವತಂತ್ರ ಸಾಹಿತ್ಯದ ಛಂದಸ್ಸು ಮುಂತಾದುವನ್ನು ಕುರಿತು ಹೇಳುತ್ತಾ ಉತ್ತಮವಾದ ನಾಟಕಗಳು ದ್ರಾವಿಡರಲ್ಲಿತ್ತೆಂದೂ ಆರ್ಯರು ಅದನ್ನು ಉಪಯೋಗಿಸಿ ಕೊಂಡಿರಬಹುದೆಂದೂ ಎಲ್ಲಾ ಕ್ಷೇತ್ರಗಳಲ್ಲಿಯೂ ಆದಂತೆ ಬಲಿಷ್ಠರಾದ ಆರ್ಯರ ಕೈ ಬಾಯಿ ಬಣ್ಣಗಳೇ ಬಲವಾಗಿ ದ್ರಾವಿಡರ ಅಂಗಗಳು ಉಡುಗಿತೆಂದೂ ಹೇಳುತ್ತಾರೆ. ಈ ಮತ ವನ್ನು ನಾವು ಒಪ್ಪಬೇಕಾಗಿದೆ. ದ್ರಾವಿಡರ ನಾಟಕ ಕಲೆಯೇ ಸಂಸ್ಕೃತಕ್ಕೆ ಮೂಲ ವೆಂದೂ ಹಾಗಲ್ಲದಿದ್ದರೆ ದ್ರಾವಿಡರದೇ ಒಂದು ಉತ್ಕೃಷ್ಟ ಕಲೆ ಇದ್ದಿತೆಂತಲೂ ಅದು ಸಂಸ್ಕೃತದೊಂದಿಗೆ ಬೆರೆತು ನಿಂತುಕೊಂಡಿದೆ ಎಂದೂ ಹೇಳಬಹುದು.

ದ್ರಾವಿಡರಲ್ಲಿ ನಾಟ್ಯಕ್ಕೆ ಕುಣಿತ ಎಂಬ ಬೇರೆ ಪದವೇ ಇರುವುದರಿಂದ ಆರ್ಯರ ಆಗಮನಕ್ಕೆ ಮುಂಚೆಯೇ ಅವರಲ್ಲಿ ನಾಟ್ಯವಿತ್ತೆಂದು ಸ್ಪಷ್ಟವಾಗುತ್ತದೆ. ನಾಗರೀಕರಾಗಿದ್ದ ದ್ರಾವಿಡರ ಕುಣಿತವೂ ನಾಗರೀಕವಾಗಿಯೇ ಇದ್ದಿರಬೇಕು. (ಕರಗದ ಕುಣಿತ ಉತ್ತರ ದೇಶದಲ್ಲಿಲ್ಲ. ಇದು ತಮಿಳರಲ್ಲಿ ಮಾತ್ರ ಉಂಟು). ರನ್ನನ ಗದಾಯುದ್ಧದಲ್ಲಿ ಈ ಕರಗದ ವಿಷಯ ಸೂಚಿತವಾಗಿದೆ.

ಚಂದ್ರಗುಪ್ತನ ಕಾಲದಲ್ಲಿ ಒಂದು ನಾಟಕಶಾಲೆ ಇದ್ದಿತೆಂದೂ ಅದು ವೈಭವದಲ್ಲಿ ಪರ್ಷಿಯಾ ರಾಜನ ಅರಮನೆಯ ವೈಭವವನ್ನು ಮೀರಿಸಿತ್ತೆಂದೂ ಸ್ಮಿತ್‌ರವರು ತಮ್ಮ ಹಿಂದೂದೇಶದ ಚರಿತ್ರೆಯಲ್ಲಿ ಬರೆದಿದ್ದಾರೆ. ಭಾಸ ಕವಿಯು ತನ್ನ ಪ್ರತಿಮಾ ನಾಟಕದಲ್ಲಿ ಅರಮನೆಯ ನಾಟಕ ಶಾಲೆಯಲ್ಲಿ ನಾಟಕ ಪ್ರದರ್ಶನಕ್ಕಾಗಿ ಅಲಂಕರಿಸುತ್ತಿದ್ದರೆಂದು ಹೇಳು ತ್ತಾನೆ. ಅಂದರೆ ಸಂಸ್ಕೃತ ನಾಟಕಗಳು ಹುಟ್ಟಿದೊಡನೆಯೇ ಅವು ಅಷ್ಟು ವಿಜೃಂಭಣೆ ಯಿಂದ ಅರಮನೆಗಳಲ್ಲಿ ನಾಟಕ ಶಾಲೆಗಳಲ್ಲಿ ಆಗುವಷ್ಟು ಜನ ಮೆಚ್ಚಿಗೆಯಾಯಿತೆ? ಜನರ ಮನಸ್ಸಿಗೆ ಅದು ಹತ್ತಿ ಬೇರೂರಲು ಕೊಂಚ ಅವಧಿ ಬೇಡವೇ? ಹಾಗೆ ನಾವು ಅವಧಿ ಬೇಕೆಂದರೆ ಪಂಡಿತರು ಕಾಲು ನಡಿಗೆಯಲ್ಲಿ ಭಾರತಕ್ಕೆಲ್ಲಾ ಇದನ್ನು ಹರಡಿರಬೇಕು. ಚಂದ್ರಗುಪ್ತನ ಕಾಲವೂ, ಭಾಸನ ಕಾಲವೂ ಸಂಸ್ಕೃತ ನಾಟಕಗಳು ಈಗಿರುವಂತೆ ರೂಪ

ತೆಗೆದುಕೊಂಡಿರುವ ಕಾಲಕ್ಕೆ ಬಹುಸಮೀಪವಾದ ಕಾಲಗಳು. ಇಷ್ಟು ಕೊಂಚ ಅವಧಿಯಲ್ಲೇ ನಾಟಕಶಾಲೆಗಳು ತಯಾರಾಗುವಷ್ಟು ಅವು ಜನರಂಜಕವಾಗಿಬಿಟ್ಟವೆ? ಹಿಂದೆ ಇದ್ದ ಯಾವುದೋ ಒಂದು ಬಗೆಯ ಒರಟು ನಾಟಕಶಾಲೆಗಳನ್ನು ಅವರ ಕಾಲದಲ್ಲಿ ಮತ್ತೆ ಸಂಸ್ಕೃತ ನಾಟಕದ ಮಾದರಿಯ ಮೇಲೆ ಹವಣಿಸಿಟ್ಟುಕೊಂಡಿರಬಹುದು. ಚಂದ್ರಗುಪ್ತನ ರಾಜಧಾನಿ ಉತ್ತರದಲ್ಲಿ. ಭಾಸನ ನಾಟಕಶಾಲೆ ದಕ್ಷಿಣದಲ್ಲಿ. ದಕ್ಷಿಣದ ನಾಟಕಶಾಲೆಗೆ ಪರ್ಷಿಯಾ ದೇಶದ ರಾಜನ ವೈಭವವು ಇಲ್ಲ. ಭಾಸನು ತನ್ನ ದೇಶದಲ್ಲಿ ನೋಡಿದ್ದ ಯಾವುದೋ ಒಂದು ದ್ರಾವಿಡ ನಾಟಕ ಶಾಲೆಯೇ ಏಕಿರಬಾರದು ?

ಬಹುಶಃ ಆಗಿನ ನಾಟಕಗಳು ಈಗ ನಾವು ಪ್ರಕರಣಗಳೆಂದು ಹೇಳುವ ದೃಶ್ಯ ಕಾವ್ಯಗಳಿದ್ದಂತೆ ಇರಬಹುದು. ದೂತವಾಕ್ಯದಂಥ ಏಕಾಂಕ ನಾಟಕಗಳನ್ನು ತೆಗೆದುಕೊಂಡರೂ "ಭಾಣ" ಮುಂತಾದ ರೂಪಕ ಜಾತಿಗಳನ್ನು ನೋಡಿದರೂ, ಒಬ್ಬರು, ಇಬ್ಬರು, ಅಥವ ಮೂವರು ವ್ಯಕ್ತಿಗಳು ಮಾತ್ರ ಇರುವುದು ಕಂಡುಬರುತ್ತದೆ. ಸಂಸ್ಕೃತದಲ್ಲಿ ಮೊದಲು ಮೊದಲು ಹುಟ್ಟಿದ ನಾಟಕಗಳು ಸಿಕ್ಕಿಲ್ಲ. ಅವುಗಳ ಸ್ವರೂಪ ಹೇಗಿತ್ತೊ ? ಎಂದು ಶ್ರೀಮರ್ಾ ಕೃಷ್ಣಶಾಸ್ತ್ರಿಗಳು ಸಂದೇಹ ಸೂಚಿಸುತ್ತಾರೆ. ಒಂದು ವೇಳೆ ಸಂಸ್ಕೃತದಲ್ಲಿ ನಾಟಕಗಳು ಮೊದಲು ಹೀಗೆಯೇ ಇದ್ದಿರಬಹುದು. ಅಥವಾ ಬೇರೆ ರಂಗಸ್ಥಳಗಳಿಂದ ಸಂಸ್ಕೃತವು ತನ್ನ ನಾಟಕದ ಕೆಲವು ಮೂಲ ರೇಖೆಗಳನ್ನು ತೆಗೆದುಕೊಂಡಿರಬಹುದು. ಹಾಗೆ ತೆಗೆದುಕೊಂಡಿದ್ದರೆ ಕೇರಳದಲ್ಲಿ ಹುಟ್ಟಿ ಬೆಳದ ಭಾಸನಿಗೆ ದ್ರಾವಿಡ ನಾಟಕಗಳ ಪರಿಣಾಮವು ಹೆಚ್ಚೇ ಹೊರತು ಗ್ರೀಕರಿಂದ ಬಂದ ನಾಟಕಗಳಿರಲಾರವು. ಗ್ರೀಕರ ನಾಟಕವೂ ದ್ರಾವಿಡರ ನಾಟಕವೂ ಬೇರೆ ಬೇರೆಯಾಗಿಯೇ ಈ ರೀತಿ ಉತ್ಪನ್ನವಾಗಿರಬಹುದು. ಭಾಸನಿಗೆ ಹೆಚ್ಚಾಗಿ ದ್ರಾವಿಡ ನಾಟಕಗಳ ಪರಿಚಯವಿದ್ದು ಅವನು ತನ್ನ ಸಂಸ್ಕೃತ ನಾಟಕಗಳಲ್ಲಿ ಅವುಗಳ ಛಾಯೆಯನ್ನು ಏಕೆ ಹಾಕಿರಬಾರದು ? ಸಂಸ್ಕೃತ ನಾಟಕವು ಆಗಿನ್ನೂ ಒಂದು ರೂಪವನ್ನು ಹೊಂದಿ ಜನ ಸಾಮಾನ್ಯದ ಮೇಲೆ ಪರಿಣಾಮವನ್ನು ಉಂಟುಮಾಡುತ್ತಿತ್ತು. ದ್ರಾವಿಡರ ಕಲೆಯು ಆ ಹೊತ್ತಿಗೆ ಪೂರ್ತಿ ನಶಿಸಿ ಹೋಗಿರಲಿಲ್ಲ.

'ಮೃಚ್ಛಕಟಿಕ"ವನ್ನು ಓದಿದರೆ ಅನೇಕ ಪ್ರಶ್ನೆಗಳು ಎದ್ದುಬರುವುವು. ಶೂದ್ರಕನು ಯಾರು ? ಅವನ ಕಾಲದೇಶಗಳ ವಿಷಯವೇನು–ಮುಂತಾದುವು. ಈ ವಿಷಯಗಳಲ್ಲಿ ಪಂಡಿತರು ಭಿನ್ನಾಭಿಪ್ರಾಯಪಡುತ್ತಾರೆ. ಕೆಲವು ಪಂಡಿತರು ಶೂದ್ರಕನೆಂಬುದು ಅಡ್ಡಹೆಸರೆಂದೆನ್ನುತ್ತಾರೆ. ನಾಟಕದ ಪ್ರಸ್ತಾವನೆಯಲ್ಲಿ ಕವಿ ಅಗ್ನಿಪ್ರವೇಶ ಮಾಡಿದ ವಿಷಯವು ಹೇಳಿದೆ. ಕಾವ್ಯವನ್ನು ಬರೆದ ಕವಿಯು ತನ್ನ ಸಾವನ್ನು ಆಗಲೇ ಹೇಗೆ ತಿಳಿಸುತ್ತಾನೆ ? ಇದನ್ನು ಯಾರಾದರೂ ಹೊಸದಾಗಿ ಜೋಡಿಸಿದರೆ ? ಅಥವಾ ಬೇರೊಬ್ಬ ಕವಿ ಇದನ್ನು ಬರೆದು ಶೂದ್ರಕನಿಗೆ ಅಂಕಿತ ಮಾಡಿದನೆ ?

ವಿ. ಜಿ. ಪರಂಜಪೆಯುವರು ಶೂದ್ರಕನು ಆಂಧ್ರ ಭೃತ್ಯರ ಮೂಲ ಪುರುಷನೆಂದೂ, ನಾಟಕವು ಕ್ರಿ. ಪೂ. ೧ನೇ ಶತಮಾನದ್ದಿರಬಹುದೆಂದೂ ಹೇಳುತ್ತಾರೆ. ಮೃಚ್ಛಕಟಿಕವು ಚಾರುದತ್ತದಿಂದ ಹುಟ್ಟಿತೆಂದೂ, ಆದುದರಿಂದ ಅದರ ಕಾಲವು ಕ್ರಿ. ಪೂ. ೧ನೇ ಶತಮಾನವಾಗಿಲಾರದೆಂದೂ ಕ್ರಿ. ಶ. ೪–೫ ಶತಮಾನವಿರಬೇಕೆಂದೂ ಕೆಲಪಂಡಿತರು ಅಭಿಪ್ರಾಯಪಡುತ್ತಾರೆ.

ಕಾವ್ಯಾಲಂಕಾರ ಸೂತ್ರವೃತ್ತಿಯ ವ್ಯಾಖ್ಯಾನದಲ್ಲಿ ಶೂದ್ರಕನು ದಾಕ್ಷಿಣಾತ್ಯನೆಂದು ಹೇಳಿದೆ. ಚಂದನಕನು ತಾನು ದಾಕ್ಷಿಣಾತ್ಯನೆಂದು ಹೇಳಿಕೊಳ್ಳುವುದೂ "ಕರ್ಣಾಟಕ ಕಲಹ"ವನ್ನು ಮಾಡುವುದೂ "ಮ್ಲೇಚ್ಛ" ಜಾತಿಯ ಹೆಸರು ಹೇಳುವುದೂ ಇವಕ್ಕೆ ಉಪಷ್ಟಂಭಕವಾಗಿ ಎಣಿಸಲ್ಪಟ್ಟಿವೆ. ಆಗ್ಗೆ ದ್ರಾವಿಡ ಭಾಷೆಗಳು ಮ್ಲೇಚ್ಛ ಭಾಷೆಯೆಂದು ಪರಿಗಣಿಸಲ್ಪಟ್ಟಿದ್ದುವು. ಆದರೆ ಶ್ರೀವರ್ಮ ಕೃಷ್ಣಶಾಸ್ತ್ರಿಗಳವರು ಈ ಉಪಷ್ಟಂಭಕಗಳು ಅಷ್ಟೇನೂ ಸಮರ್ಪಕವಲ್ಲವೆಂದು ಹೇಳುತ್ತಾರೆ. ಇದೇ ಸಂದರ್ಭದಲ್ಲಿ ತಮ್ಮ ಸಂಸ್ಕೃತ ನಾಟಕದಲ್ಲಿ ಶ್ರೀವರ್ಮ ಶಾಸ್ತ್ರಿಗಳು ಬರೆದಿರುವ ಚಿಕ್ಕಕ್ಷರದ ಸೂಚನೆಗಳು ಬಹುಸ್ವಾರಸ್ಯವಾಗಿವೆ. ಇವುಗಳನ್ನು ನೋಡಿದರೂ, ಮೃಚ್ಛಕಟಿಕದಲ್ಲಿಯ ಕಥೆ, ಭಾಷೆ, ಪಾತ್ರಗಳು ಇವುಗಳನ್ನು ವಿಮರ್ಶಿಸಿ ನೋಡಿದರೂ, ಶೂದ್ರಕನ ಕಾಲವು ಬಹುಶಃ ಕ್ರಿ. ಪೂ. ಹೋಗುತ್ತದೆ. ಕೆ. ಸಿ. ಮೆಹೆಂಡಲೆಯವರು "ಭಂಡಾರ್‌ಕರ್ ಕಮೆಮೋರೇಷ‌ರ್" ಎಂಬ ಪುಸ್ತಕದಲ್ಲಿ ಅವನ ಕಾಲ ಬಹು ಪ್ರಾಚೀನವೆಂದು ಹೇಳುತ್ತಾರೆ.

ಈ ವಿಷಯದಲ್ಲಿ ಶ್ರೀವರ್ಮ ಶಾಸ್ತ್ರಿಗಳು ದಾಕ್ಷಿಣಾತ್ಯರ ವಿಷಯವನ್ನು ಕಂಡು ಕೇಳಿ ಅಥವಾ ಊಹಿಸಿಯೂ ಔತ್ತರೇಯನು ಅವರ ಭಾಷೆಗಳನ್ನು ಆಡಬಹುದೆಂದು ಅಭಿಪ್ರಾಯ ಪಡುತ್ತಾರೆ.

"ಮೃಚ್ಛಕಟಿಕ"ಕ್ಕೂ, "ಚಾರುದತ್ತ"ಕ್ಕೂ ಪರಸ್ಪರ ಸಂಬಂಧವನ್ನು ಎಲ್ಲರೂ ಒಪ್ಪಲೇಬೇಕು. ಹಾಗಿದ್ದ ಪಕ್ಷದಲ್ಲಿ ಈ ಎರಡಕ್ಕೂ ಮೂಲ ಮತ್ತೊಂದು ದ್ರಾವಿಡ ನಾಟಕವೋ ಕಥೆಯೋ ಏಕಿರಬಾರದು ? ಅದು ಕೇವಲ "ಮ್ಲೇಚ್ಛ"ರದಾಗಿದ್ದುದರಿಂದ ಆರ್ಯರು ಸಂಸ್ಕೃತದ ಪರಿವರ್ತನೆಯನ್ನು ಮಾತ್ರ ಮನ್ನಿಸಿ ದ್ರಾವಿಡರನ್ನು ಗಣನೆಗೆ ತಾರದೆ ಇರಬಹುದು. ಈಗ ಪಂಚತಂತ್ರದ ಕಥೆಗಳನ್ನು ಇತರ ಭಾಷೆಗಳವರು ತಾವೇ ಬರೆದಂತೆ ಹೇಳುತ್ತಿಲ್ಲವೇ ? ಹಾಗೆಯೇ ಏಕೆ ಇರಬಾರದು ? ಇಲ್ಲದಿದ್ದರೆ ಮೃಚ್ಛಕಟಿಕನ ಪ್ರಸ್ತಾವನೆಯಲ್ಲಿ ಕವಿಯು ಅಗ್ನಿಪ್ರವೇಶಮಾಡಿದನೆಂದು ಹೇಳುವುದು ಕಥೆಯ ಮೂಲಕವಿಯು ಮ್ಲೇಚ್ಛನಿದ್ದು ಅವನು ಅಗ್ನಿಪ್ರವೇಶ ಮಾಡಿದಮೇಲೆ ಅವನನ್ನು ಸಂಸ್ಕೃತ ಪಂಡಿತರಾದ ಬ್ರಾಹ್ಮಣರು ಶೂದ್ರಕನೆಂದು ಕರೆದಿರಬಹುದು. ಅಂತೂ ಶೂದ್ರಕನೂ ಅವನ ನಾಟಕವೂ ಒಂದು ಸಮಸ್ಯೆಯಾಗಿದೆ. ಅದು ಸರಿಯಾಗಿ ಬಗೆ ಹರಿಯುವವರೆಗೂ, ಅವನ ನಾಟಕದ ರೀತಿಯನ್ನು ನೋಡಿದರೆ ಪರಂಜಪೆಯವರು ಹೇಳಿದಂತೆ ಅವನು ಬಹು ಪ್ರಾಚೀನನೆಂದೂ ದ್ರಾವಿಡಕುಲಕ್ಕೆ ಸೇರಿದವನೆಂದೂ ಸಂದೇಹಪಡಬಹುದಾಗಿದೆ. ಇವನು ದ್ರಾವಿಡನೇ ಆಗಿದ್ದರೆ ದ್ರಾವಿಡ ನಾಟಕವು ಆಗ ಎಷ್ಟು ಉತ್ತಮವಾಗಿದ್ದಿತು ! ಶ್ರೀಮಾನ್ ಶಾಸ್ತ್ರಿಗಳು "ಚಾರುದತ್ತ ವಸಂತತಿಲಕೆ ಇವರ ಕಥೆಯೂ ಪಾಲಕರಾಜನ ವೃತ್ತಾಂತವೂ ಜೈನರ ಹರಿವಂಶ ಅಥವಾ ನೇಮಿನಾಥ ಪುರಾಣದಲ್ಲಿಯೂ ಬರುತ್ತದೆ; ಆದರ ಅದು ಮೂಲವಿರಲಾರದು" ಎಂದು ಹೇಳುತ್ತಾರೆ. ನೇಮಿನಾಥ ಪುರಾಣವನ್ನು ಬರೆದ ಜೈನಕವಿ ದ್ರಾವಿಡನು. ಈ ಕಥೆಯು ಆಗಲೇ ದ್ರಾವಿಡರಲ್ಲಿ ಪ್ರಚುರದಲ್ಲಿದ್ದು ಬಹುಶಃ ನಾಟಕರೂಪದಲ್ಲಿಯೇ ಇದ್ದು ಸಂಸ್ಕೃತಕ್ಕೆ ಏಕೆ ತೆಗೆದುಕೊಂಡಿರಬಾರದು? ಸುಂದರವಾದ ಒಂದು ವಸ್ತುವನ್ನು ಮತ್ತೊಂದು ಭಾಷೆಯು ತನ್ನದೇ ಎಂದು ಹೇಳಿಕೊಳ್ಳುವುದೂ, ಅಥವಾ ಪರಿವರ್ತನೆ ಮಾಡಿಕೊಂಡು ಸ್ವಭಾಷೆಗೆ ಕೀರ್ತಿ ಬರಲೆಂದು ಮೂಲದ ಹೆಸರು ಹೇಳದೆ ಇರುವುದೂ ಹೊಸದೇನೂ ಅಲ್ಲ. ಸಂಸ್ಕೃತ ಸಾಹಿತ್ಯದ ಬಲವು ದಕ್ಷಿಣದಲ್ಲಿ ಕಡಿಮೆ

ಯಾಗಿ ಮತ್ತೆ ದ್ರಾವಿಡಭಾಷೆಗಳು ತಲೆಯೆತ್ತಿದಾಗ, ಎಂದರೆ ಸುಮಾರು ೧೦೦೦ ವರ್ಷಗಳ ಕೆಳಗೆ ನಮಗೆ ಸಿಕ್ಕಿರುವ ಸಾಹಿತ್ಯದಲ್ಲಿ ಕನ್ನಡದಲ್ಲಿ ನಾಟಕಗಳಿದ್ದುವೆಂದು ಮಾತ್ರ ತಿಳಿಯುತ್ತದೆಯೇ ಹೊರತು ಯಾವ ನಾಟಕವೂ ಸಿಕ್ಕಿಲ್ಲ. ಈ ನಾಟಕಗಳೂ ಪದ್ಯಕಾವ್ಯಗಳೊಂದಿಗೆ ಸೇರಿಹೋಗಿದ್ದುವು. ಸಂಸ್ಕೃತ ಸಾಹಿತ್ಯವು ಬೆಳೆದು ಸಾಧಾರಣ ಜನರ ಹಿಡಿತಕ್ಕೆ ಸಿಕ್ಕದೆ ಮಹಾಪಂಡಿತರ ಬ್ರಾಹ್ಮಣರ ವಶದಲ್ಲಿದ್ದು ರಾಜಪೋಷಿತವಾಗಿದ್ದುದರಿಂದ, ಸಂಸ್ಕೃತವಲ್ಲದ ಪ್ರತಿಯೊಂದು ಕಲೆಯೂ ತಲೆ ಎತ್ತದಂತೆ ಆಯಿತು. ಆದುದರಿಂದ ಅನೇಕ ಶತಮಾನಗಳು ಜನರಂಜನೆಗೆ ನಾಟಕವು ಈಗ ಇರುವಂತೆ ಸಾಮಾನ್ಯವಾಗಿಯೂ ಸುಲಭವಾಗಿಯೂ ಇರಲಿಲ್ಲ. ಆದುದರಿಂದಲೇ ನಾಟಕ ಬರಹಗಾರರೂ ಬಹಳ ಕಡಿಮೆಯಾದರು. ಕವನಗಳೂ ಕವಿಗಳೂ ಹೆಚ್ಚಾದರು. ರಾಷ್ಟ್ರಕೂಟದ ನೃಪತುಂಗನ ಕವಿರಾಜಮಾರ್ಗದಲ್ಲಿ ನಾಟಕಕರ್ತೃಗಳಿದ್ದರೆಂದು ಅವರನ್ನು ಪದ್ಯಕಾವ್ಯದವರೊಂದಿಗೆ ಸೇರಿಸಿ ಹೇಳಿದ್ದಾನೆ. ವಿಶದವಾಗಿ ಅವರ ಹೆಸರುಗಳನ್ನೂ ಅವರ ಕೃತಿಗಳನ್ನೂ ಹೇಳಿಲ್ಲ. ಅಂದರೆ ಆಗ ನಾಟಕಗಳಿಗೆ ಹೆಚ್ಚು ಉತ್ತೇಜನವು ದೊರೆಯುಲಿಲ್ಲವೆಂದು ತೋರುತ್ತದೆ. ಜನರಿಗೆ ಆಗಲೇ ತಮ್ಮ ಸ್ವಂತ ಭಾಷೆ ಮತ್ತು ಕಲೆಗಳ ಮೇಲೆ ಅಭಿಮಾನ ಹೆಚ್ಚಾಗುತ್ತಿದ್ದಿತು. ಪಂಪನು ತನ್ನ ಭಾರತದಲ್ಲಿ ಅರ್ಜುನನು ತಪಸ್ಸು ಮಾಡುತ್ತಿರುವಾಗ ಅಪ್ಸರೆಯರು ಬಂದು ಕೆಡಿಸಲು ಉದ್ಯುಕ್ತರಾದರೆಂದು ಹೇಳಿ ಅರ್ಜುನನು ದ್ರಾವಿಡನೇಯೆಂದೂ ಅವನಿಗೆ ದೇಶಿಕುಣಿತ ಇಷ್ಟವೆಂದೂ ತಿಳಿದು "ಬಲದೊಳುರ್ವಸಿ ದೇಸಿಗೆ ದೇಸಿಯಾಡಿದಳ್" ಎಂದು ಹೇಳುವಾಗ ದೇಸಿಕುಣಿತದ ಚಿತ್ರವನ್ನು ಎತ್ತಿ ತೋರಿಸಿದ್ದಾನೆ. ಇದರಿಂದ ಇನ್ನೂ ಆಗ ಭರತನಾಟ್ಯದ ಜೊತೆಗೆ ದೇಸಿ ಕುಣಿತವೂ ಇದ್ದಿರಬಹುದು. ಹೀನಸ್ಥಿತಿಯಲ್ಲಿದ್ದ ದೇಸಿಕುಣಿತವು ಪಂಪನಂತಹ ರಸಿಕನಿಗೆ ಅಷ್ಟು ರಮ್ಯವಾಗಿದ್ದರೆ ಕ್ರಿ. ಪೂ. ಕ್ಕೆ ಮೊದಲು ದ್ರಾವಿಡರದೇ ಎಲ್ಲವೂ ಆಗಿದ್ದಾಗ, ಸಂಸ್ಕೃತದ ತುಳಿತಕ್ಕೆ ಸಿಕ್ಕದಿದ್ದಾಗ ದ್ರಾವಿಡರ ನಾಟ್ಯ ಕಲೆಯು ಎಷ್ಟರ ಮಟ್ಟಿಗೆ ಇದ್ದಿರಬಹುದೆಂಬುದು ಹೇಳುವುದಕ್ಕಿಂತಲೂ ಊಹಿಸಿಕೊಳ್ಳುವುದು ಉತ್ತಮ. ಪಂಪನ ತರುವಾಯ ರನ್ನನೂ ತನ್ನ ಗದಾಯುದ್ಧವನ್ನು ಬರೆದಿರುವುದು ನಾಟಕ ದೃಶ್ಯದಂತೆಯೇ ಇದೆಯೆಂದು ಅದು ಈಗ ಇರುವ ಗದಾಯುದ್ಧನಾಟಕಂ ಎಂಬ ರೂಪದಿಂದ ನೋಡಿದರೆ ಸಾಧಾರಣವಾಗಿ ಚಂಪೂಗ್ರಂಥಗಳನ್ನು ನಾಟಕ ರೂಪಕ್ಕೆ ತರಬಹುದೆಂದೂ ಈ ನಾಟಕಗಳಿಂದಲೇ ಚಂಪೂ ಗ್ರಂಥಗಳು ಹುಟ್ಟಿರಬಹುದೆಂದೂ ತೋರುತ್ತದೆ.

ಆರ್ಯರ ಭಾರತ ರಾಮಾಯಣಗಳಲ್ಲಿ ಪಾತ್ರರಚನೆಯನ್ನೂ, ಅದೇ ಪಾತ್ರಗಳು ಕೆಲವು ದಕ್ಷಿಣದವರ ಕೈಲಿ ಹೊಂದಿರುವ ಮಾರ್ಪಾಟನ್ನೂ ನೋಡಿದರೆ ಪಾತ್ರರಚನೆ ದಕ್ಷಿಣದಲ್ಲಿ ಆಗ್ಗೆ ಬಹು ಉನ್ನತಸ್ಥಿತಿಯಲ್ಲಿತ್ತೆಂದು ಹೇಳಬಹುದು. ಇದಕ್ಕೆ ಎರಡು ಉದಾಹರಣೆಗಳು: ಕೇರಳ ದೇಶದ ಭಾಸಕವಿಯ ಮಾರ್ಪಾಡು. ಭಾಸನ ಕರ್ಣನನ್ನು ನೋಡಿ. ಪಾಂಡವರಿಗೆ ರಾಜ್ಯ ಕೊಡೋಣವೋ ಬೇಡವೋ ಎಂದು ದುರ್ಯೋಧನನು ಕೇಳಿದರೆ, ಆ ವಿಚಾರ ನಿನಗೆ ಸೇರಿದ್ದು. ಹೋರಾಡುವುದು ನಮಗೆ ಸೇರಿದ್ದು. ಅಣ್ಣ ತಮ್ಮಂದಿರ ಜಗಳ ನನಗೇತಕ್ಕೆ ಎಂದು ದೊಡ್ಡ ಮಾತಾಡುತ್ತಾನೆ. ಅಭಿಮನ್ಯು ಕೈಸೆರೆ ಸಿಕ್ಕಿದ್ದಕ್ಕೆ ನಾವು ಶೂರರೆಲ್ಲರೂ ನಾರುಮಡಿ ಉಟ್ಟುಕೊಳ್ಳಬೇಕು ಎಂದು ಹೇಳುತ್ತಾನೆ. ಪಂಪನೂ ಒಂದು ಕಡೆ ಅಂಬೆಯು ಸಾಲ್ವ ರಾಜನಲ್ಲಿಗೆ ಹೋಗಿ ಮದುವೆಯಾಗು

ಎಂದು ಕೇಳಿದ್ದಕ್ಕೆ ಅವನು ಭೀಷ್ಮನಿಂದ ಸೋಲುಪಡೆದಿದ್ದನಾಗಿ "ಪೆಂಡಿರ್ ಪೆಂಡಿರೊಳೆಂತು ಬೆರಸುವರಬಲೇ" ಎಂದು ಹೇಳುತ್ತಾನೆ. ಅಭಿಮನ್ಯು, ಅರ್ಜುನ, ಭೀಮ ಇವರುಗಳ ಸಂಭಾಷಣೆ ಮನೆಯಲ್ಲಿ ಆಡುವಂತಿದೆ. ಭಾಸನು ನಾಟಕಕ್ಕೆ ಹೆಸರು ಕೊಡುವುದೇ ಒಂದು ವೈಯಕ್ತಿಕ ರೀತಿ. ಸಂಸ್ಕೃತದ ಇತರ ನಾಟಕಗಳಂತೆ ಅಲ್ಲ. ಗ್ರೀಕರಲ್ಲೂ ಹೆಲನ್, ಅಜಾಕ್ಸ್ ಮೊದಲಾದ ಹೆಸರುಗಳೂ, ಶಾಕುಂತಳಾ, ಹರಿಶ್ಚಂದ್ರ ಮೊದಲಾದ ಹೆಸರುಗಳೂ ಕಥೆ ಏನೆಂಬುದನ್ನು ತಿಳಿಸುತ್ತವೆ. ಭಾಸನ ಹೆಸರು ನೋಡಿ. 'ಪಂಚರಾತ್ರ' ಎಂದರೆ ಅದರ ಕಥೆಯೇನೋ ನೋಡಿದ ಹೊರತು ತಿಳಿಯುವುದಿಲ್ಲ. ಪ್ರತಿಮಾ ನಾಟಕ ಎಂದರೂ ಹೀಗೆಯೇ. ಪ್ರತಿಮಾ ನಾಟಕದ ಕೈಕೆಯನ್ನೂ ಸೀತೆಯನ್ನೂ ನೋಡಿ. ಎಂತಹ ಸ್ತ್ರೀಯರು !

ವಾಲ್ಮೀಕಿಯ ಕೈಕೆ ಮತ್ತು ಸೀತೆಯ ಪಾತ್ರಗಳು ಭಾಸನು ಚಿತ್ರಿಸಿರುವಷ್ಟು ಉಜ್ಜ್ವಲಗಳಾಗಿಲ್ಲ. ಪಂಪನ ಭಾರತದಲ್ಲಿಯೂ ಹೀಗೆಯೇ ಏಕಪತಿವ್ರತೆ. ಕರ್ಣನು ಎಲ್ಲರ ಹೃದಯವನ್ನೂ ಸೂರೆಗೊಳ್ಳುವ ಪಾತ್ರ. ಈ ತರದ ಪಾತ್ರರಚನೆಯು ನುರಿತ ಕೈಗಳಿಗೆ ಸಾಧ್ಯ. ಇವರಿಗೆ ಇರುವ ಅನುಭವಗಳೇ ಅದಕ್ಕೆ ಕಾರಣ. ಅವು ಮುಖ್ಯವಾಗಿ ದ್ರಾವಿಡ ಸಂಸ್ಕೃತಿಯ ಪರಿಣಾಮವಾಗಿರಬೇಕು. ಇವುಗಳಿಂದ ಅವರ ನಾಗರೀಕತೆಯು ಎಷ್ಟು ಉನ್ನತಾವಸ್ಥೆಯಲ್ಲಿತ್ತೆಂದು ಊಹಿಸಬಹುದು.

ಈ ಮೇಲೆ ಹೇಳಿರುವ ಅನೇಕ ಕಾರಣಗಳಿಂದ ದ್ರಾವಿಡರಲ್ಲಿ ಒಂದು ನಾಟಕ ಕಲೆ ಇತ್ತೆಂದೂ ಅದು ಈಗಿನ ಬಯಲಾಟ ಮುಂತಾದುವುಗಳಂತೆ ಪರಿಣಮಿಸಿ ನಶಿಸಿಹೋಗಿದೆಯೆಂದೂ ಅದರ ಉಚ್ಛ್ರಾಯ ದಶೆಯಲ್ಲಿ ಅದು ಬಹು ಉನ್ನತ ರೀತಿಯಲ್ಲಿದ್ದಿರಬಹುದೆಂದೂ ಸಂಸ್ಕೃತ ಪಂಡಿತರು ಅದನ್ನು ಬೆಳೆಯಲೀಸದೆ ಅದರ ಗುಣಗಳನ್ನು ತಾವು ಹೀರಿಕೊಂಡು ಅದನ್ನು ಸಪ್ಪೆ ಮಾಡಿ ಸಂಸ್ಕೃತವನ್ನು ಉಬ್ಬಿಸಿ ಕೊಬ್ಬಿಸಿದರೆಂದೂ ನಾವು ಹೇಳಿದರೆ ತಪ್ಪಾಗಲಾರದು.



# ಪುರಾಣಗಳು

**ಎನ್. ಎಸ್. ಅನಂತರಂಗಾಚಾರ್ಯ,** ಬಿ.ಎ. (ಆನರ್ಸ್), ಬಿ.ಟಿ.

ಪುರಾಣಗಳು ಭಾರತೀಯ ಇತಿಹಾಸದ ಅಮೂಲ್ಯ ನಿಧಿ. ಇವು ಹಿಂದೂ ಧರ್ಮಕ್ಕೆ ಆಧಾರಭೂತವಾದವು. ನಮ್ಮ ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆಗಳ ಪರಿಚಯ ಪಡೆಯಲು ಪುರಾಣಗಳೇ ನಮಗೆ ಶರಣು.[1] ಇವು ಬಹಳ ಪುರಾತನವಾದ ಆಖ್ಯಾನಗಳಾದರೂ ಇಂದಿಗೂ ಹೊಚ್ಚ ಹೊಸದಾಗಿ ತೋರಿ ಪ್ರಭಾವ ಬೀರುವ ಬಲ್ಮೆಯುಳ್ಳವು. ಹಿರಿಕಿರಿಯರೆನ್ನದೆ ಭಾರತ ದೇಶದ ಲಕ್ಷೋಪಲಕ್ಷರ ಹೃದಯದಲ್ಲಿ ಹಿಂದೂಧರ್ಮದ ಉಜ್ವಲ ತತ್ವಗಳನ್ನು ರೂಪುಗೊಳಿಸಿ ಪ್ರತಿಷ್ಠಾಪನೆ ಮಾಡುವುವು ಇವು. ಧ್ರುವ, ಪ್ರಹ್ಲಾದ, ಹರಿಶ್ಚಂದ್ರ, ಅಂಬರೀಷ, ಮಾರ್ಕಂಡೇಯ ಮೊದಲಾದ ಅಸಂಖ್ಯ ಆದರ್ಶ ವ್ಯಕ್ತಿಗಳ ರೂಪನ್ನು ನಮ್ಮ ಹೃದಯಮಂದಿರದಲ್ಲಿ ಕಡೆದಿರಿಸಿ, ದೈವಿಕಭಾವನೆ ಮೂಡಿಸಿ, ಆ ಮಹಾಮಹಿಮರ ದಿವ್ಯಾನುಭವಗಳ ಕಥನದಿಂದ ರೋಮಾಂಚಗೊಳಿಸಿ ಇಂದಿಗೂ ನಮ್ಮನ್ನು ಭಾವನಾಮಯರನ್ನಾಗಿ ಮಾಡುವುವು ಇವು. ಎಷ್ಟು ಜನ ನರ ನಾರಿಯರು ಇಂದಿಗೂ ಧ್ರುವನ, ಅಂಬರೀಷನ, ಮಾರ್ಕಂಡೇಯನ, ಪ್ರಹ್ಲಾದನ, ಗಜೇಂದ್ರನ ಕಥೆಯನ್ನು ಆಸಕ್ತಿಯಿಂದ ಕೇಳಿ ಪುಲಕಿತರಾಗುವುದಿಲ್ಲ! ಆ ಭಕ್ತಿಸರೋವರ ದಲ್ಲಿ ಮಿಂದು ಪುನೀತರಾಗುತ್ತಿಲ್ಲ! ಅಂಥ ಆದರ್ಶಗಳನ್ನು ತಾವೂ ಪಾಲಿಸಿ ಧನ್ಯರಾಗಲು ಹಂಬಲಿಸುತ್ತಿಲ್ಲ!

ಪುರಾಣಗಳನ್ನೂ, ಇತಿಹಾಸಗಳನ್ನೂ ತಿಳಿಯದಿದ್ದವನು ವೇದದ ಅರ್ಥವನ್ನು ಪ್ರತಿಪಾದಿಸಲಾರನೆಂಬ ವ್ಯಕ್ತಿ ಇವುಗಳ ಮಹತ್ವವನ್ನು ತಿಳಿಸುವುದು.[2] ವೇದೋಕ್ತ ವಾದ ಅಮರ ತತ್ತ್ವಗಳನ್ನು ಕ್ರಿಯಾತ್ಮಕವಾಗಿ ತೋರಿಸುವ ದಿವ್ಯ ರಂಗಮಂಟಪಗಳು ಪುರಾಣಗಳು. ವೇದಾರ್ಥವನ್ನು ವಿಶದೀಕರಿಸಿ ಎಲ್ಲ ಜನರ ಬುದ್ಧಿಗೆ ಎಟಕುವಂತೆ ವಿವರಿಸುವ ಹೊಣೆ ಪುರಾಣಗಳದು. ವೇದಗಳ ಸರ್ವಸಾರವನ್ನೂ ಹಿಂಡಿ ಮಂಜುಳವಾದ ರೀತಿಯಲ್ಲಿ ಅದನ್ನು ಪ್ರತಿಪಾದಿಸಿ ಸರ್ವ ಜನರೂ ಅದನ್ನು ಸವಿದು, ಅದರ ಬೆಳಕಿನಲ್ಲಿ ತಮ್ಮ ಜೀವನವನ್ನು ಸುಧಾರಿಸಿಕೊಳ್ಳುವಂತೆ ಮಾಡಿದ ಯಶಸ್ಸು ನಿಸ್ಸಂದೇಹವಾಗಿ ಪುರಾಣಗಳದೇ.

ಭಗವಂತನಲ್ಲಿ ಅನನ್ಯಶರಣತೆಯೇ ಮತವೆನ್ನಿಸುವುದು. ಸರ್ವ ಚೇತನರನ್ನೂ ಮೀರಿದ ಸರ್ವಶಕ್ತನೂ, ಸಕಲಗುಣಾಕರನೂ, ಸರ್ವಾಂತರ್ಯಾಮಿಯೂ, ಕರುಣಾ ಕರನೂ ಆದ ಭಗವಂತನನ್ನು ತಿಳಿದು ಅವನ ಪದತಲದಲ್ಲಿ ನಮ್ಮನ್ನೂ, ನಮ್ಮ ಸರ್ವಸ್ವ

---

[1] ಚತುರ್ದಶ ವಿದ್ಯಾಸ್ಥಾನಗಳಲ್ಲಿ ಪುರಾಣವೂ ಒಂದು.
ಅಂಗಾನಿವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ ॥

[2] ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
ಬಿಭೇತ್ಯಲ್ಪಶ್ರುತಾದ್ವೇದಃ ಮಾಮಯಂ ಪ್ರತರಿಷ್ಯತಿ ॥

ವನ್ನೂ ಅರ್ಪಣೆ ಮಾಡಿ ಕೃತಾರ್ಥರಾಗಬಹುದೆಂಬ ಸರ್ವೋಪಾದೇಯವಾದ ತತ್ವಹಿತ ಪುರುಷಾರ್ಥಗಳನ್ನು ಮಿಕ್ಕ ಎಲ್ಲ ಶಾಸ್ತ್ರಗಳಿಗಿಂತ ಸರಳವಾಗಿ, ನೇರವಾಗಿ ಮನಗಾಣಿಸಿದ ಕೀರ್ತಿ ಪುರಾಣಗಳದು. 'ಭಗವತಿ ವಿಮುಖಸ್ಯ ನಾಸ್ತಿ ಸಿದ್ಧಿಃ ವಿಷಮಮೃತಂ ಭವತೀತಿ ನೇದಮಸ್ತಿ' ಎಂಬ ಸತ್ಯಸ್ಥಿತಿಯನ್ನು ಜನತೆಯಲ್ಲಿ ಪ್ರಚಾರಮಾಡಲೆಳಸಿವೆ ಪುರಾಣಗಳು.

ಹಿಂದೂಧರ್ಮ 'ಸತ್ಯಂ ವದ, ಧರ್ಮಂ ಚರ' ಎಂದು ವಿಧಿಸಿ ಸುಮ್ಮನಾಗಿಬಿಡಲಿಲ್ಲ. ಹರಿಶ್ಚಂದ್ರ, ನಳ, ಮಾರ್ಕಂಡೇಯ ಮೊದಲಾದ ಅಸಂಖ್ಯ ಸತ್ಯವಾದಿಗಳ, ಭಗವದ್ಭಕ್ತರ, ಧರ್ಮನಿಷ್ಠರ ಉಜ್ವಲ ದೃಷ್ಟಾಂತಗಳನ್ನೂ, ಆ ಸಾಧುಸಂತರ ದಿವ್ಯಾನುಭವಗಳನ್ನೂ ಪ್ರದರ್ಶಿಸಿ ತನ್ಮೂಲಕ ಆ ಪರಮ ತತ್ವಗಳನ್ನು ಅನುಷ್ಠಾನದಲ್ಲಿ ತರಲು ಸಾಧ್ಯವೆಂಬುದನ್ನು ಪ್ರಾಯೋಗಿಕವಾಗಿ ತೋರಿಸಿದೆ. ಹೀಗೆ ವೇದಗಳಲ್ಲಿ ಸೂಕ್ಷ್ಮವಾಗಿರುವ ಹಿಂದೂಧರ್ಮದ ಅಂಕುರಗಳು ಇತಿಹಾಸಪುರಾಣಗಳಲ್ಲಿ ಕುಡಿವರಿದು, ಪಲ್ಲವಿಸಿ ಕುಸುಮಿತವಾಗಿ ಹಿಂದೂಧರ್ಮದ ಪುಷ್ಪಸಮೃದ್ಧಿಯ ಸೌರಭವನ್ನು ಎಲ್ಲೆಡೆ ಸೂಸುತ್ತಿವೆ.

ಮಹತ್ತರವಾದ ಪುಣ್ಯದ ಫಲವಾಗಿ ನಮಗೆ ದೇಹ ಎಂಬ ನೌಕೆ ಲಭಿಸಿದೆ. ಈ ದೇಹ ಸುಸ್ಥಿತವಾಗಿರುವಾಗಲೇ ಸಂಸಾರವೆಂಬ ದುಃಖೋದಧಿಯನ್ನು ದಾಟಬಿಡಲು ತ್ವರೆಪಡಬೇಕು. ಇಂಥ ಬುದ್ಧಿಯೋಗವನ್ನು ಮೇಲು ಕೀಳೆನ್ನದೆ ಸರ್ವರಲ್ಲಿಯೂ ಉಂಟುಮಾಡಲು ಶ್ರಮಿಸುವುವು ಪುರಾಣಗಳು. ಮಾನವನು ಜೀವನದ ಗುರಿಯನ್ನು ಮುಟ್ಟಲನುಸರಿಸಬೇಕಾದ ವಿಧಾನವನ್ನು ಉದಾಹರಣೆಗಳೊಡನೆ ತೋರಿಸಿಕೊಡುವ ಯಶಸ್ಸು ಪುರಾಣಗಳದು. ಹೀಗೆ ಪುರಾಣಗಳಿಗೆ ಧಾರ್ಮಿಕವಾದ ಮಹತ್ವವಿರುವುದನ್ನು ಕಾಣಬಹುದು.

ಇಷ್ಟೇ ಅಲ್ಲ. ಇವು ಸಾಮಾಜಿಕ, ಐತಿಹಾಸಿಕ, ಶೈಕ್ಷಣಿಕ ಮತ್ತು ಭೌಗೋಳಿಕ ಮಹತ್ವಗಳನ್ನು ಹೊಂದಿವೆ. ನಮ್ಮ ಪ್ರಾಚೀನ ಸಂಸ್ಕೃತಿಯ, ನಾಗರಿಕತೆಯ ಮತ್ತು ಧರ್ಮನಿಷ್ಠ ಋಷಿಕುಲಗಳಿಂದ ಮೆರೆದ ಸಮಾಜದ ಪರಿಚಯ ಇಲ್ಲಿ ನಮಗಾಗುವುದು. ಪ್ರಾಚೀನಕಾಲದ ರಾಜಾಧಿರಾಜರ ಇತಿಹಾಸಗಳು ಇಲ್ಲಿ ದೊರೆಯುವುವು. ಇವುಗಳಿಂದ ತ್ಯಾಗ, ಅಹಿಂಸೆ, ಅಸ್ತೇಯ, ತುಷ್ಟಿ, ಸಮತೆ ಮೊದಲಾದ ಆದರ್ಶಗುಣಗಳಲ್ಲಿ ಶಿಕ್ಷಣವೂ ದೊರೆಯುವುದು. ನಮ್ಮ ಪ್ರಾಚೀನ ನಗರಗಳ ಪರಿಚಯ, ತೀರ್ಥಕ್ಷೇತ್ರಾದಿಗಳ ಸ್ವರೂಪ ವರ್ಣನೆ ಮೊದಲಾದುವೂ ಇಲ್ಲಿ ಗೊತ್ತಾಗುವುವು.

ಸೃಷ್ಟಿಯಿಂದ ಹಿಡಿದು ಮಾನವನ ಸಮಾಜದ ಬೆಳೆವಣಿಗೆಯನ್ನೂ ಇಲ್ಲಿ ನಾವು ಕಾಣುತ್ತೇವೆ. ಪುರಾಣಗಳು ಸೃಷ್ಟಿ, ಲಯ ಮತ್ತು ಪುನಃ ಸೃಷ್ಟಿ, ಸೃಷ್ಟಿಯ ಆದಿವಂಶಾವಳಿ, ಮನ್ವಂತರಗಳು ಮತ್ತು ಸೂರ್ಯಚಂದ್ರ ವಂಶಗಳ ಅರಸರ ವರ್ಣನೆಗಳನ್ನೊಳಗೊಂಡಿವೆ.[1] ಹೀಗೆ ಆದಿಕಾಲದಿಂದಲೂ ಮಾನವ ಸಮಾಜದ ವಿಕಾಸವನ್ನು ಉಜ್ವಲವಾಗಿ ರೂಪಿಸಿರುವುವು ಪುರಾಣಗಳು. ಆದ್ದರಿಂದಲೇ ಆದರ್ಶವಾದ ಇತಿಹಾಸಗಳೆನ್ನಿಸಿಕೊಳ್ಳುವುವು ಇವು.

ಹೀಗೆ ಪುರಾಣಗಳು ವಿಷಯ ವೈಲಕ್ಷಣ್ಯದಿಂದ ಅಪೂರ್ವವಾದವು. ಇಷ್ಟೇ ದುಸ್ತರವೂ, ದುರಧಿಗಮವೂ ಆದ ವೇದಗಳ ಭಾಷೆಯಂತೆ ಅಲ್ಲದೆ ಲಲಿತವೂ, ಚಾರುತ

---

[1] ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ।
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ ॥

ಮವೂ, ಮಂಜುಳವೂ ಆದ ಭಾಷಾಪದ್ಧತಿಯಿಂದಲೂ ಇವು ಅತ್ಯಪೂರ್ವವಾಗಿವೆ. ಮನ ಮೋಹಕವಾದ ಕಾವ್ಯಪದ್ಧತಿಯು ಈ ಪುರಾಣಗಳನ್ನು ಅನುಪಮವನ್ನಾಗಿ ಮಾಡಿದೆ. ಅಲ್ಪಾಸ್ಥಿರಗಳನ್ನು ಬಯಸುವ ಕಾಮ್ಯಕಾಮಿಗಳನ್ನು ಭಗವತ್ಕಾಮಿಗಳಾಗಿ ಪರಿವರ್ತಿಸಬಲ್ಲ ವಿಶಿಷ್ಟವಾದ ವಸ್ತುವಿನಿಂದಲೂ, ಮನೋಹರವಾದ ಕಾವ್ಯಶೈಲಿಯಿಂದಲೂ ಕೂಡಿ ಇವು ಅನುಪಮವಾಗಿ ಕವಿಲೋಕಕ್ಕೆ ಉಪಜೀವ್ಯವಾಗಿ ಪವಿತ್ರವೂ, ಹಿತಕರವೂ, ಮನೋ ಹರವೂ ಆಗಿ ಭಾರತದ ನರನಾರಿಯರ ಹೃದಯಸರಸ್ಸಿನಲ್ಲಿ ಆನಂದದ ತೆರೆಗಳನ್ನೆಬ್ಬಿಸಿ ವಿವೇಕದ ಹೊನಲನ್ನು ಹರಿಸುವುವು.

## ಇವುಗಳ ಪ್ರಾಚೀನತೆ

ಸರ್ವಜನಹಿತಕರವಾದ ಪುರಾಣಗಳು ಒಂದಲ್ಲ ಒಂದು ರೂಪಿನಲ್ಲಿ ಬಹಳ ಹಿಂದಿನಕಾಲದಿಂದಲೂ ಪ್ರಚಾರದಲ್ಲಿದ್ದವು. ವೇದಗಳ ಕಾಲದಿಂದಲೂ ಇವು ಪ್ರಚಾರದ ಲ್ಲಿದ್ದವೆನ್ನಲು ಅನೇಕ ಆಧಾರಗಳಿವೆ. **ತೈತ್ತಿರೀಯ ಆರಣ್ಯಕದಲ್ಲಿ** (11–9) "ಬ್ರಾಹ್ಮಣಾ ನೀತಿಹಾಸಾನ್ **ಪುರಾಣಾನಿ** ಕಲ್ಪಾನ್ ಗಾಥಾ ನಾರಾಶಂಸೀಃ" ಎಂದು ಪುರಾಣಗಳ ಉಲ್ಲೇಖವಿದೆ. **ಅಥರ್ವವೇದದಲ್ಲಿ** ಉಚ್ಛಿಷ್ಟನೆಂದು ಹೆಸರುಳ್ಳ ಪರಮಪುರುಷನಿಂದ ಚತುರ್ವೇದಗಳಾದಮೇಲೆ ಪುರಾಣಗಳ ಸೃಷ್ಟಿ ಆಯಿತೆಂದು ಹೇಳಿದೆ—

"ಋಚಃ ಸಾಮಾನಿ ಛಂದಾಂಸಿ ಪುರಾಣಂ ಯಜುಷಾಸಹ ।
ಉಚ್ಛಿಷ್ಟಾಜ್ಜಜ್ಞಿರೇ ಸರ್ವೇ ದಿವಿದೇವಾದಿವಿಶ್ರಿತಃ ॥(XI-7-24)

**ಛಾಂದೋಗ್ಯ ಉಪನಿಷತ್ತಿನಲ್ಲಿ** "ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ಸಾಮವೇದಮಥರ್ವಣಂ ಚತುರ್ಥಂ ಇತಿಹಾಸಪುರಾಣಂ ಪಂಚಮಂ ವೇದಾನಾಂವೇದಂ" ಎಂದೂ, **ಬೃಹದಾರಣ್ಯಕದಲ್ಲಿ** "ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನಿ" ಎಂದೂ ಪುರಾಣವನ್ನು ಉದಹರಿಸಿದ್ದಾರೆ. **ಶಾಂಖಾಯನ ಸೂತ್ರ** (xvi. 1), **ಆಶ್ವಲಾಯನ ಸೂತ್ರ** (x. 7) ಮತ್ತು **ಶತಪಥ ಬ್ರಾಹ್ಮಣದಲ್ಲಿ** (xiii. 3–1–1) ಅಶ್ವಮೇಧಯಾಗದ ಸಂದರ್ಭದಲ್ಲಿ ದಿನಚರಿಯನ್ನು ವಿವ ರಿಸುತ್ತಾ ಎಂಟನೆಯ ದಿನ ಮತ್ಸ್ಯಸಮ್ಮದನ ಕಥೆ ಹೇಳಬೇಕೆಂದೂ ತಿಳಿಸಿ "ಪುರಾಣಂ ವಾಯುಪ್ರೋಕ್ತಂ ಆಖ್ಯೇಯಂ" ಎಂದು ವಿಧಿಸಿದೆ. **ಗೌತಮ ಧರ್ಮಸೂತ್ರದಲ್ಲಿ** (11–19) ರಾಜನು ಶಾಸನ ವ್ಯವಸ್ಥೆ ಮಾಡಲು ವೇದ, ಧರ್ಮಶಾಸ್ತ್ರ, ವೇದಾಂಗ ಮತ್ತು ಪುರಾಣಗಳನ್ನು ಆಧಾರವಾಗಿಟ್ಟುಕೊಳ್ಳಬೇಕೆಂದು ಹೇಳಿದೆ. **ಆಪಸ್ತಂಬ ಧರ್ಮಶಾಸ್ತ್ರ** ದಲ್ಲಿ ಭವಿಷ್ಯತ್ ಪುರಾಣದ ಎರಡು ಶ್ಲೋಕಗಳೂ ಉದಾಹೃತವಾಗಿವೆ. ಇವೆಲ್ಲಾ ಪ್ರಮಾಣಗಳಿಂದ ಪುರಾಣಗಳು ವೇದಗಳ ಕಾಲದಿಂದಲೂ ಜನತೆಯಲ್ಲಿ ಬಳಕೆಯಲ್ಲಿದ್ದು ಬಹಳ ಜನಪ್ರಿಯವಾಗಿದ್ದವೆಂದು ತಿಳಿದುಬರುತ್ತದೆ.

ಕ್ರಿ. ಪೂ. ಮೂರನೆಯ ಶತಮಾನದಲ್ಲಿದ್ದ **ಕೌಟಿಲ್ಯನು** ಪುರಾಣಗಳಿಗೆ ಪ್ರಮುಖ ವಾದ ಸ್ಥಾನವನ್ನು ಕಲ್ಪಿಸಿದ್ದಾನೆ. ರಾಜನ ಅನೇಕ ಅಧಿಕಾರಿಗಳಲ್ಲಿ ಪೌರಾಣಿಕನೂ ಒಬ್ಬನಾಗಿರಬೇಕೆಂಬುದು ಇವನ ಮತ. ಉನ್ಮಾರ್ಗಗಾಮಿಗಳನ್ನು ಸುಧಾರಿಸಿ ಸನ್ಮಾ ರ್ಗಕ್ಕೆ ತರಲು ಪುರಾಣಗಳನ್ನು ಉಪದೇಶಿಸಬೇಕೆಂದು ಕೌಟಿಲ್ಯನು ಸೂಚಿಸುತ್ತಾನೆ. ಶಂಕರಾಚಾರ್ಯರು, ಕುಮಾರಿಲರು ಮೊದಲಾದವರೆಲ್ಲರೂ ಪುರಾಣಗಳನ್ನು ಪ್ರಮಾಣ

ಗ್ರಂಥಗಳೆಂದು ಅಂಗೀಕರಿಸಿ ಅವುಗಳನ್ನು ಉದಹರಿಸುತ್ತಾರೆ. ಶ್ರೀ ಹರ್ಷವರ್ಧನ ಶಿಲಾದಿತ್ಯನ ಆಸ್ಥಾನದಲ್ಲಿದ್ದ **ಬಾಣ ಮಹಾಕವಿ** ತನ್ನ ಕಾದಂಬರಿಯಲ್ಲಿ "ಪುರಾಣೇಷು ವಾಯು ಪ್ರಲಪಿತಂ" ಎಂದು ಉಲ್ಲೇಖಿಸಿ ಅವನ ಕಾಲದಲ್ಲಿ ಪುರಾಣ ಪ್ರವಚನಗಳು ನಡೆಯುತ್ತಿದ್ದವೆಂಬುದನ್ನು ತಿಳಿಸಿದ್ದಾನೆ. ಇವುಗಳನ್ನೆಲ್ಲಾ ಗಮನಿಸಿದರೆ ಭಾರತೀಯ ಜನತೆಯ ಮೇಲೆ ಪುರಾಣಗಳು ಎಂಥ ಪ್ರಭಾವವನ್ನೂ, ವರ್ಚಸ್ಸನ್ನೂ ಬೀರಿದ್ದವೆಂಬುದು ತಿಳಿಯುವುದು. ಇಂದಿಗೂ ಭಾರತ ಜನತೆ ಒಂದಲ್ಲ ಒಂದುಬಗೆ ಪುರಾಣಗಳ ಅಮೃತವಾಹಿನಿಯನ್ನು ಈಂಟಿ ಆತ್ಮಲಾಭ ಪಡೆಯುತ್ತಲೇ ಇದೆ.*

## ಪುರಾಣಗಳೂ ವೇದವೂ

ವೇದಗಳಿಗೂ ಪುರಾಣಗಳಿಗೂ ನಿಕಟವಾದ ಬಾಂಧವ್ಯವಿದೆ. ವಸ್ತುತಃ ಇವೆರಡೂ ಬೇರೆ ಬೇರೆಯಲ್ಲ. 'ಯಸ್ಯ ನಿಶ್ವಸಿತಂ ವೇದಾಃ' ಎಂಬಂತೆ ಭಗವಂತನ ಹೃದಯದಿಂದ ಆವಿರ್ಭೂತವಾದ ವೇದಗಳನ್ನು ಗ್ರಹಿಸಿ ಧರಿಸುವ ಸಾಮರ್ಥ್ಯ ಎಲ್ಲರಿಗೂ ಇಲ್ಲದುದರಿಂದ ಈ ಕೊರತೆಯನ್ನು ಪೂರ್ಣಗೊಳಿಸಲು ಪುರಾಣಗಳು ಹುಟ್ಟಿಕೊಂಡವು. ಜನತೆಯ ಮಂಗಳಕ್ಕಾಗಿ ಆ ವೇದಸರಸ್ವತಿಯನ್ನು ಎಲ್ಲರೂ ಆರಾಧಿಸುವಂತೆ ವ್ಯಾಸಮಹರ್ಷಿಗಳೇ ಮೊದಲಾದ ಋಷಿಗಳು ಅನುಗ್ರಹಿಸಿದರು. ವೇದದ ಮಹತ್ತತ್ವಗಳನ್ನು ಸಾಮಾನ್ಯ ಜನರಿಗೆ ಸಾರುವುದೇ ಪುರಾಣಗಳ ಉದ್ದೇಶ. ಇದಕ್ಕಾಗಿ ಸುಲಭವೂ, ಸರಳವೂ ಆದ ಶೈಲಿಯಲ್ಲಿ ರಚಿತವಾದ ಪುರಾಣಗಳು ಭಾರತೀಯರ ವಿಚಾರಧಾರೆಯನ್ನು ಎಲ್ಲೆಡೆಯಲ್ಲಿಯೂ ಹರಡಿದವು. ಹೀಗೆ ಋಷಿಗಳ ಬುದ್ಧೀಂದ್ರಿಯ ಮನಸ್ಸುಗಳಿಗೆ ಮೀರಿದ ವೇದಗಳ ಗಹನ ತತ್ವವನ್ನು ಪುರಾಣಗಳು ಸಾಧಾರಣ ಜನತೆಯ ಬುದ್ಧಿ, ಇಂದ್ರಿಯ, ಮನಸ್ಸುಗಳಿಗೂ ಗೋಚರವಾಗುವಂತೆ ಮಾಡಿವೆ. 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂದು ವೇದ ಸಾರಿತು ಬ್ರಹ್ಮ ಸ್ವರೂಪವನ್ನು. ಪುರಾಣಗಳಾದರೋ ಆ ಬ್ರಹ್ಮಸ್ವರೂಪವನ್ನೇ ಪತಿತ ಪಾವನನಾದ ಪರಮಾತ್ಮನ ಅಪ್ರಾಕೃತ ದಿವ್ಯಮಂಗಳವಿಗ್ರಹದ ರೂಪದಲ್ಲಿ ತೋರಿಸಿದವು. ಎಲ್ಲ ವಿಧವಾದ ನಾಮರೂಪಭಾವಗಳು ಬ್ರಹ್ಮಸ್ವರೂಪವೆಂದು ವೇದ ಘೋಷಿಸಿತು. ಇದನ್ನೇ ಪುರಾಣಗಳೂ ಕೂಡ ಸಾರಿದವು ಪರಮಾತ್ಮನು ಸರ್ವವಿಧವಾದ ಹೆಸರುಗಳಿಗೂ, ರೂಪಗಳಿಗೂ, ಭಾವಗಳಿಗೂ ಆಶ್ರಯನೆಂದು. 'ಏಕಂ ಸತ್ ವಿಪ್ರಾಃ ಬಹುಧಾ

---

* ಆಧುನಿಕ ವಿಮರ್ಶಕರ ಅಭಿಪ್ರಾಯದಂತೆ ಈಗ ಉಪಲಬ್ಧವಾಗಿರುವ ಪುರಾಣಗಳು ಅತಿ ಪ್ರಾಚೀನವಲ್ಲ. ಆದರೆ ಇವುಗಳಿಗೆ ಸಮನಾದ ಇಂಥ ಮೂಲ ಪುರಾಣಗಳೇ ಹಿಂದೆ ಇದ್ದಿರಬಹುದೆಂದು ಇವರು ಊಹಿಸುತ್ತಾರೆ. ಕ್ರಿ. ಶ. ನಾಲ್ಕನೆಯ ಶತಮಾನದಲ್ಲಿಯೂ ಪುರಾಣಗಳ ರಚನೆ ಆಗುತ್ತಿದ್ದಿತೆಂದು ಇವರ ಅಭಿಪ್ರಾಯ. ಅಲ್ಲದೆ ಪುರಾಣಗಳ ಹೆಸರನ್ನು ಅರ್ವಾಚೀನರು ಬಳಸಿಕೊಂಡು ತಮ್ಮತಮ್ಮ ಕೃತಿಗಳನ್ನು ಹೊರತಂದರೆಂದೂ, ಈಗ ಉಪಲಬ್ಧವಾಗಿರುವ ಪುರಾಣಗಳಿಗೂ ಅನೇಕಾನೇಕರು ತಮ ತಮಗಿಷ್ಟ ಬಂದ ಅಂಶಗಳನ್ನೂ ಸೇರಿಸಿದರೆಂದೂ ಹೇಳುತ್ತಾರೆ. ಆದರೆ ಈಗ ದೊರೆತಿರುವ ಪುರಾಣಗಳ ಕಾಲ ನಿರ್ಣಯದ ವಿಚಾರದಲ್ಲಿಯೂ ಏಕಾಭಿಪ್ರಾಯವಿಲ್ಲ. ಕೆಲವು ವಿದ್ವಾಂಸರು ಇವು ಕ್ರಿ ಪೂ. ಐದನೇ ಶತಮಾನದೊಳಗೇ ಈ ಸ್ಥಿತಿಯನ್ನು ಹೊಂದಿದವೆಂದೂ ಅಭಿಪ್ರಾಯ ಪಡುತ್ತಾರೆ. ಹೇಗಾದರೂ ಗುಪ್ತರ ಕಾಲದೊಳಗೆ ಈಗ ಉಪಲಬ್ಧವಾಗಿರುವ ಎಲ್ಲಾ ಪುರಾಣಗಳ ರಚನೆಯೂ ಪೂರ್ಣವಾಗಿದ್ದವೆಂಬುದನ್ನು ನಾವು ಖಂಡಿತವಾಗಿ ಹೇಳಬಹುದು.

ವದಂತಿ' ಎಂಬ ವೇದಸಿದ್ಧಾಂತವೇ ಪುರಾಣಗಳಲ್ಲಿ 'ಸಮಸ್ತ ವಿಶ್ವವೂ ಭಗವಂತನ ಅನಂತ ವಿಭೂತಿಗಳ ಮಧುರರೂಪ'ವೆಂದು ಪ್ರತಿಪಾದಿಸಲ್ಪಟ್ಟಿದೆ. ಶತಪಥ ಬ್ರಾಹ್ಮಣದಲ್ಲಿ ಮೂರು ಪಾದನ್ಯಾಸಗಳಿಂದ ಪರಮಾತ್ಮನು ದೇವತೆಗಳಿಗೆ ವ್ಯಾಪಕಶಕ್ತಿಯನ್ನು ಉಂಟು ಮಾಡಿದನೆಂದು ಹೇಳಿದೆ. ತೈತ್ತರೀಯ ಸಂಹಿತೆಯಲ್ಲಿ ಜಲಮಗ್ನವಾದ ಭೂಮಿಯನ್ನು ಪ್ರಜಾಪತಿ ರೂಪಿಯಾದ ಪರಮಾತ್ಮ ವರಾಹರೂಪ ಧರಿಸಿ ಮೇಲಕ್ಕೆತ್ತಿದನೆಂದು ಉಕ್ತವಾಗಿದೆ. ಶತಪಥಬ್ರಾಹ್ಮಣದಲ್ಲಿ ಮತ್ಸ್ಯಾವತಾರದ ಸೂಚನೆ ಇದೆ. ತೈತ್ತರೀಯ ಆರಣ್ಯಕದಲ್ಲಿ ಸೃಷ್ಟಿಮಾಡಲುದ್ಯುಕ್ತನಾದ ಪ್ರಜಾಪತಿ ಕೂರ್ಮರೂಪ ಧರಿಸಿದನೆಂದಿದೆ. ಅಂಕುರ ರೂಪದಲ್ಲಿರುವ ಈ ಅಂಶಗಳೆಲ್ಲಾ ಪುರಾಣಗಳಲ್ಲಿ ಪುಷ್ಟಿಗೊಂಡು ಅನಂತವಾದ ಅವತಾರಗಳ ರೂಪನ್ನೂ, ಮುಖ್ಯವಾಗಿ ದಶಾವತಾರಗಳ ರೂಪವನ್ನೂ ಪಡೆದವು. ಹೀಗೆ ವೇದಗಳಲ್ಲಿರುವ ಅಂಶಗಳನ್ನೇ ವಿಶದಪಡಿಸುವ ಪುರಾಣಗಳು ಅವುಗಳಿಗಿಂತ ತತ್ವತಃ ಭಿನ್ನವಲ್ಲವೆಂಬುದು ಗೋಚರಿಸುವುದು.

## ಪುರಾಣ ಹೇಳುವವರು ಯಾರು ?

ಭಾರತದ ಪ್ರಾಚೀನ ಸಂಸ್ಕೃತಿಯು ಪರಂಪರೆ ದ್ವಿಮುಖವಾಗಿ ಹರಡಿತೆನ್ನಬಹುದು. ಇವು ವೈದಿಕ ಮತ್ತು ಪೌರಾಣಿಕ ಪರಂಪರೆಗಳು. ವಿಶಿಷ್ಟಾಧಿಕಾರಿಗಳು ವೇದಪರಂಪರೆಯನ್ನು ಬೆಳೆಸಿಕೊಂಡು ಬಂದು ವೈದಿಕಧರ್ಮ ಪ್ರಚಾರ ಮಾಡುತ್ತಿದ್ದರು. ಆದರೆ ಪುರಾಣಗಳನ್ನು ವ್ಯಾಖ್ಯಾನ ಮಾಡಿ ಪ್ರಚಾರ ನಡೆಸುತ್ತಿದ್ದವರು ಸೂತರು. ಮೊದಲು ಪುರಾಣಗಳನ್ನು ವಿವರಿಸಿದವರು ಅಗ್ನಿಕುಂಡಸೂತರು. ಇವರು ವೇನನೆಂಬ ಮಹಾರಾಜನ ಪುತ್ರನಾದ ಪೃಥುವಿನ ಯಜ್ಞದಲ್ಲಿ ಅಗ್ನಿಕುಂಡದಿಂದ ಉತ್ಪನ್ನರಾದರೆಂದು ಹೇಳಿದೆ.[1]

"ವೈನ್ಯಸ್ಯ ತು ಪೃಥೋರ್ಯಜ್ಞೇ ವರ್ತಮಾನೇ ಮಹಾತ್ಮನಃ ।
ಸುತ್ಯಾಯಾಮಭವತ್ ಸೂತಃ ಪ್ರಥಮಂ ವರ್ಣ ವೈಕೃತಂ ॥
ಐಂದ್ರೇಣ ಹವಿಷಾ ತತ್ರ ಹವಿಃ ಪೃಕ್ತಂ ಬೃಹಸ್ಪತೇಃ ।
ಜುಹಾವೇಂದ್ರಾಯ ದೈವೇನ ತತಃ ಸೂತೋ ವ್ಯಜಾಯತ ॥"

ಇವರಿಗೇ ಲೋಮಹರ್ಷಣರೆಂಬ ಅಭಿಧಾನವೂ ಇದ್ದಿತು. ನೈಮಿಶಾರಣ್ಯದಲ್ಲಿ ಸೇರಿದ ಹದಿನೆಂಟುಸಾವಿರ ಋಷಿಗಳ ಜ್ಞಾನದಾಹವನ್ನು ಇಂಗಿಸಿದ ಮಹಾಮಹಿಮರಿವರು. ಇವರ ಮಕ್ಕಳು ಸೌತಿ ಉಗ್ರಶ್ರವಸರೆಂಬುವರು.[2] ಇವರೇ ಮಹಾಭಾರತದ ಮತ್ತು

[1] (ಅ) "ಅಗ್ನಿಕುಂಡ ಸಮುದ್ಭೂತಃ ಸೂತೋ ನಿರ್ಮಲಮಾನಸಃ ।" (ಆ) ಹರಿವಂಶದಲ್ಲಿ "ಅಗ್ನಿಜೋಲೋಮಹರ್ಷಣಃ । ತಸ್ಯಪುತ್ರಃ ಸೌತಿಃ ಉಗ್ರಶ್ರವಾಃ, ನ ತು 'ಬ್ರಾಹ್ಮಣ್ಯಾಂ ಕ್ಷತ್ರಿಯಾತ್ ಸೂತಃ' ಇತಿ ಸ್ಮೃತ್ಯುಕ್ತಃ । (ಇ) ಕೌಟಿಲ್ಯನು ಸಂಕರಜಾತಿ ವಿಚಾರ ಹೇಳುವಾಗ — ವೈಶ್ಯಾನ್ಮಾಗಧವೈದೇಹಕೌ (ಕ್ಷತ್ರಿಯ ಬ್ರಾಹ್ಮಣ್ಯೋಃ) ಕ್ಷತ್ರಿಯಾತ್ ಸೂತಃ (ಬ್ರಾಹ್ಮಣ್ಯಾಂ) । ಪೌರಾಣಿಕಸ್ತು ಅನ್ಯೋ ಸೂತಃ ಮಾಗಧಶ್ಚ । (ಈ) ಅಗ್ನಿಪುರಾಣದಲ್ಲಿ

ಪೃಷದಾಜ್ಯಾತ್ ಸಮುತ್ಪನ್ನಃ ಸೂತಃ ಪೌರಾಣಿಕೋ ದ್ವಿಜಃ ।
ವಕ್ತಾ ವೇದಾದಿ ಶಾಸ್ತ್ರೇಣ ತ್ರಿಕಾಲಾನಲ ಧರ್ಮವಿತ್ ॥

[2] ಸೂತಸ್ಯಾಪತ್ಯಂ ಸೌತಿಃ ದ್ರೌಣಿವತ್.

ಹರಿವಂಶದ ಕಥೆಯನ್ನು ಹೇಳಿದವರು. ಪುರಾಣಪ್ರಪಂಚದಲ್ಲಿ ಇವರ ಪಾಂಡಿತ್ಯ ಅನುಪಮವಾಗಿದ್ದಿತು.

" ಪುರಾಣಮಖಿಲಂ ತಾತ ಪಿತಾ ತೇಽಧೀತವಾನ್ ಪುರಾ ।
ಕಚ್ಚಿತ್ ತ್ವಮಪಿ ತತ್ಸರ್ವಂ ಅಧೀಷೇ ಲೋಮಹರ್ಷಣೇ ॥
ಪುರಾಣೇ ಹಿ ಕಥಾ ದಿವ್ಯಾ ಆದಿವಂಶಾಶ್ಚ ಧೀಮತಾಂ ।
ಕಥ್ಯಂತೇ ಯೇ ಪುರಾಽಸ್ಮಾಭಿಃ ಶ್ರುತಪೂರ್ವಾಃ ಪಿತುಸ್ತವ ॥ "

ಎಂದು ಶೌನಕರು ಇವರನ್ನು ಕುರಿತು ಹೇಳುತ್ತಾರೆ.

ಪುರಾಣಗಳ ಪ್ರವಚನ ಹೀಗೆ ಅಗ್ನಿಕುಂಡೋತ್ಪನ್ನರಾದ ಅಸಾಧಾರಣ ಪಾಂಡಿತ್ಯವುಳ್ಳ ಸೂತರಿಂದ ಆರಂಭವಾಯಿತು. ಮುಂದೆ ಈ ಹೊಣೆಯನ್ನು ಹೊತ್ತವರು 'ಕ್ಷತ್ರಿಯಾತ್ ಸೂತ ಏವತು' ಎಂದು ಹೇಳಲಾದ ಪ್ರತಿಲೋಮಜರು.[1] ಸಾಮಾನ್ಯ ಜನತೆಯವರೇ ಈ ಪ್ರಚಾರ ಕಾರ್ಯವನ್ನು ವಂಶಪಾರಂಪರ್ಯವಾಗಿ ನಡೆಸಿಕೊಂಡು ಬಂದರು. ಪಂಚಮ ವೇದವೆಂದು ಪ್ರಸಿದ್ಧವಾದ ಭಾರತವನ್ನೂ, ರಾಮಾಯಣವನ್ನೂ, ಹಾಗೆಯೇ ಪುರಾಣಗಳನ್ನೂ ರಕ್ಷಿಸಿಟ್ಟು ಎಲ್ಲರಿಗೂ ತಿಳಿಯುವಂತೆ ಪ್ರವಚನ ಮಾಡುತ್ತಿದ್ದ ಸೂತರುಗಳ ವಾಙ್ಮಧುವನ್ನೀಂಟಿ ನಮ್ಮ ಜನ ಧನ್ಯರಾಗುತ್ತಿದ್ದರು.

## ಪುರಾಣಗಳ ಸಂಖ್ಯೆ

ಅಷ್ಟಾದಶ ಪುರಾಣಗಳೆಂದು ಪ್ರಸಿದ್ಧವಾದ ಪುರಾಣಗಳನ್ನೂ ಅವುಗಳ ಶ್ಲೋಕ ಸಂಖ್ಯೆಯನ್ನೂ ಕೆಳಗೆ ಗುರುತಿಸಲಾಗಿದೆ.[2]—

| | | | |
|---|---|---|---|
| ಬ್ರಹ್ಮಪುರಾಣ | .... | 10000 | ಶ್ಲೋಕಗಳು |
| ಪದ್ಮಪುರಾಣ | ... | 55000 | ,, |
| ವಿಷ್ಣುಪುರಾಣ | .... | 23000 | ,, |
| ಶಿವಪುರಾಣ | .... | 24000 | ,, |
| ಭಾಗವತಪುರಾಣ | .... | 18000 | ,, |
| ನಾರದಪುರಾಣ | .... | 25000 | ,, |
| ಮಾರ್ಕಂಡೇಯಪುರಾಣ | .... | 9000 | ,, |
| ಅಗ್ನಿಪುರಾಣ | .... | 10500 | ,, |
| ಭವಿಷ್ಯಪುರಾಣ | .... | 14500 | ,, |
| ಬ್ರಹ್ಮವೈವರ್ತಪುರಾಣ | .... | 18000 | ,, |
| ಲಿಂಗಪುರಾಣ | .... | 11000 | ,, |

[1] ಪುರಾಣ ಹೇಳುತ್ತಿದ್ದವರು ಸೂತವರ್ಣದವರೆಂದು ಶ್ರೀಮದ್ಭಾಗವತದಲ್ಲಿಯೂ ಬೃಹನ್ನಾರದ ಪುರಾಣದಲ್ಲಿಯೂ ಹೇಳಿದೆ.

[2] ಶ್ರೀಮದ್ಭಾಗವತ 12ನೆಯ ಸ್ಕಂದ, 13ನೆಯ ಅಧ್ಯಾಯ ನೋಡಿ ;
ನಾರದಪುರಾಣ ಅಧ್ಯಾಯ 92 ನೋಡಿ ; ವಿಷ್ಣು ಪುರಾಣದಲ್ಲಿ ತೃತೀಯಾಂಶ 6ನೆಯ ಅಧ್ಯಾಯ ನೋಡಿ.

| | | | |
|---|---|---|---|
| ವರಾಹಪುರಾಣ | .... | 24000 | ,, |
| ಸ್ಕಂದಪುರಾಣ | .... | 81100 | ,, |
| ವಾಮನಪುರಾಣ | .... | 10000 | ,, |
| ಕೂರ್ಮಪುರಾಣ | .... | 17000 | ,, |
| ಮತ್ಸ್ಯಪುರಾಣ | .... | 14000 | ,, |
| ಗರುಡಪುರಾಣ | .... | 19000 | ,, |
| ಬ್ರಹ್ಮಾಂಡ ಪುರಾಣ | .... | 12000 | ,, |

ಈ ಹದಿನೆಂಟು ಪುರಾಣಗಳಲ್ಲದೆ ಇಪ್ಪತ್ತು ಉಪಪುರಾಣಗಳೂ ಇವೆ. ಸೂತ ಸಂಹಿತೆಯಲ್ಲಿ ಈ ಉಪಪುರಾಣಗಳ ಹೆಸರನ್ನು ಕೆಳಗೆ ತೋರಿಸಿರುವಂತೆ ಕೊಟ್ಟಿದೆ. ಸನತ್ಕುಮಾರ ಉಪಪುರಾಣ, ನರಸಿಂಹ, ನಾಂದೀ, ಶಿವಧರ್ಮ, ದುರ್ವಾಸ, ನಾರದೀಯ, ಕಪಿಲ, ಮಾನವ, ಉಶನಸ್, ಬ್ರಹ್ಮಾಂಡ, ವರುಣ, ಕಾಲಿಕಾ, ವಸಿಷ್ಠ, ಲಿಂಗ, ಮಹೇಶ್ವರ, ಸಾಂಬ, ಪರಾಶರ, ಸೌರ, ಮಾರೀಚ ಮತ್ತು ಭಾರ್ಗವ ಉಪಪುರಾಣಗಳು.

ಈ ಉಪಪುರಾಣಗಳ ಹೆಸರು ಮತ್ತು ಸಂಖ್ಯೆಯ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಉಪಪುರಾಣವೆಂದು ಹೇಳುವುದನ್ನೇ ಮತ್ತೆ ಕೆಲವರು ಮಹಾಪುರಾಣವೆಂದು ಹೇಳುತ್ತಾರೆ.

ವಿಶ್ವದ ಯಾವ ದೇಶದಲ್ಲಿಯೂ ಆಗದೆ ಇರುವಷ್ಟು ಬೃಹತ್ ಪ್ರಮಾಣದಲ್ಲಿ ಧಾರ್ಮಿಕ ಸಾಹಿತ್ಯ ನಮ್ಮ ದೇಶದಲ್ಲಿ ಬೆಳೆದಿದೆಯೆಂಬುದನ್ನು ಇದರಿಂದ ತಿಳಿಯಬಹುದು. ರಾಮಾಯಣ ಮಹಾಭಾರತಗಳನ್ನೂ ಇವುಗಳೊಡನೆ ಸೇರಿಸಿದರೆ ಆಗುವ ಒಟ್ಟು ಶ್ಲೋಕ ಸಂಖ್ಯೆ ಸುಮಾರು ಆರೂಕಾಲು ಲಕ್ಷದಷ್ಟಾಗುವುದು. ಉಪಪುರಾಣಗಳನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ ಈ ಧಾರ್ಮಿಕ ಸಾಹಿತ್ಯ ಏಳೂಕಾಲು ಲಕ್ಷ ಶ್ಲೋಕಾತ್ಮಕವಾಗುವುದು. ಇವೆಲ್ಲಾ ವೇದಧರ್ಮದ ರಹಸ್ಯವನ್ನೂ, ತತ್ವದರ್ಶನವನ್ನೂ, ವ್ಯವಹಾರ ವಿಚಾರಗಳನ್ನೂ ತಿಳಿಸಲು ಹೊರಟಿವೆಯೆಂಬುದನ್ನು ಎಣಿಸಿದರೆ ಇವುಗಳ ಮಹತ್ವ ತಿಳಿಯುವುದು. ಸಾಮಾನ್ಯ ಜನರ ಶ್ರೇಯಸ್ಸಿಗಾಗಿ ಇಂಥ ವಿರಾಟ್ ಸಾಹಿತ್ಯವನ್ನು ಸೃಜಿಸಿದ ನಮ್ಮ ಋಷಿವರ್ಯರು ನಿಜವಾಗಿಯೂ ಧನ್ಯರು.[1]

ಪ್ರಖ್ಯಾತವಾದ ಈ ಅಷ್ಟಾದಶ ಪುರಾಣಗಳಲ್ಲಿ ಬರುವ ವಿಚಾರಗಳನ್ನು ಸೂಕ್ಷ್ಮವಾಗಿ ಹೀಗೆ ಸಂಗ್ರಹಿಸಬಹುದು.

## ಬ್ರಹ್ಮಪುರಾಣ

ಇದು ಆದಿಬ್ರಹ್ಮ ಎಂದು ಪ್ರಸಿದ್ಧವಾಗಿದೆ. ಇದರಲ್ಲಿ ೨೪೫ ಅಧ್ಯಾಯಗಳಿವೆ. ಮೊದಲು ಸೃಷ್ಟಿಯ ವಿಚಾರವೂ, ಅನಂತರ ಸೂರ್ಯ ಮತ್ತು ಸೋಮವಂಶದ ಸಂಕ್ಷಿಪ್ತ ವಿವರಣೆಯೂ, ಹತ್ತು ಅಧ್ಯಾಯಗಳಲ್ಲಿ ಪಾರ್ವತೀದೇವಿಯ ಕಥೆಯೂ, ಮಾರ್ಕಂಡೇಯನ

[1] ಸಂಸ್ಕೃತ ಭಾಷೆಯಲ್ಲಡಗಿರುವ ಈ ಪುರಾಣ ಪ್ರಪಂಚವನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡಲೆಂದೇ ನಮ್ಮ ಸಂಸ್ಥಾನದ ಜನಪ್ರಿಯರಾದ ಮಹಾರಾಜರು ಪುರಾಣ ಮಾಲೆಯೊಂದನ್ನು ತಮ್ಮ ನಾಮಾಂಕಿತದಿಂದ ಆರಂಭಿಸಿ ತಿಳಿಯಾದ ಕನ್ನಡಭಾಷೆಯಲ್ಲಿ ಪ್ರಕಟಿಸಿ ಎಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಆಖ್ಯಾನವೂ, ಅನಂತರ ಗೌತಮೀ, ಗಂಗಾ, ಕೃತ್ತಿಕಾತೀರ್ಥ, ಚಕ್ರತೀರ್ಥ, ಪುತ್ರ ತೀರ್ಥ, ಯಮತೀರ್ಥ, ಆಪಸ್ತಂಬತೀರ್ಥ ಮೊದಲಾದ ಪ್ರಾಚೀನ ತೀರ್ಥಗಳ ಮಾಹಾತ್ಮ್ಯ ವರ್ಣನೆಯೂ, ೩೨ ಅಧ್ಯಾಯಗಳಲ್ಲಿ ಶ್ರೀಕೃಷ್ಣನ ಚರಿತ್ರೆಯೂ ಇವೆ. ಸೂರ್ಯನ ಮಹಿಮೆಯೂ, ಅವನ ಪ್ರಭುತ್ವದ ನಿರ್ದೇಶವೂ ಇವೆ. ಸಾಂಖ್ಯಯೋಗದ ಸಮೀಕ್ಷೆಯೂ ಹತ್ತು ಅಧ್ಯಾಯಗಳಲ್ಲಿದೆ. ಕರಾಳಜನಕನ ಪ್ರಶ್ನೆಗನುಗುಣವಾಗಿ ವಸಿಷ್ಠರು ಸಾಂಖ್ಯ ತತ್ವವನ್ನು ವಿವರಿಸುತ್ತಾರೆ. ಈ ಪೌರಾಣಿಕ ಸಾಂಖ್ಯತತ್ವ ಸೇಶ್ವರ ಸಾಂಖ್ಯ. ಜ್ಞಾನ ಮತ್ತು ಭಕ್ತಿಗಳ ಸಮನ್ವಯ ಇಲ್ಲಿ ಹೇಳಿದೆ. ಧರ್ಮವೇ ಪರಮಪುರುಷಾರ್ಥವೆಂದು ಉಕ್ತವಾಗಿದೆ.

ಧರ್ಮೋ ಮತಿರ್ಭವತು ವಃ ಪುರುಷೋತ್ತಮಾನಾಂ
ಸ ಹ್ಯೇಕ ಏವ ಪರಲೋಕಗತಸ್ಯ ಬಂಧುಃ ।
ಅರ್ಥಾಃಸ್ತ್ರಿಯಶ್ಚ ನಿಪುಣೈರಪಿ ಸೇವ್ಯಮಾನಾ
ನೈವ ಪ್ರಭಾವಮುಪಯಾಂತಿ ನಚ ಸ್ಥಿರತ್ವಂ ॥

## ಪದ್ಮಪುರಾಣ

ಗಾತ್ರದಲ್ಲಿ ಪುರಾಣಗಳಲ್ಲೆಲ್ಲಾ ಇದು ಎರಡನೆಯದು. ಈ ಪುರಾಣದಲ್ಲಿ ಐದು ಖಂಡಗಳಿದ್ದವೆಂದು ಹೇಳಿದೆ.

ಪ್ರಥಮಂ ಸೃಷ್ಟಿಖಂಡಂ ಹಿ ಭೂಮಿಖಂಡಂ ದ್ವಿತೀಯಕಂ ।
ತೃತೀಯಂ ಸ್ವರ್ಗಖಂಡಂ ಚ ಪಾತಾಲಶ್ಚ ಚತುರ್ಥಕಂ ॥
ಪಂಚಮಂ ಚೋತ್ತರಂ ಕಾಂಡಂ ಸರ್ವಪಾಪ ಪ್ರಣಾಶನಂ ।

ಮೊದಲನೆಯ ಸೃಷ್ಟಿಖಂಡದಲ್ಲಿ ಪೌಷ್ಕರಪರ್ವ, ತೀರ್ಥಪರ್ವ, ತೃತೀಯಪರ್ವ, ರಾಜವಂಶಪರ್ವ ಮತ್ತು ಮೋಕ್ಷಪರ್ವಗಳೆಂದು ೫ ಪರ್ವಗಳಿದ್ದವೆಂದು ಹೇಳಿದೆ.

ಈ ಖಂಡದಲ್ಲಿ ಸಮುದ್ರಮಥನ, ಪೃಥುವಿನ ಉತ್ಪತ್ತಿ, ವಾಮನಾವತಾರ ಕಥೆ, ವೃತ್ರಾಸುರ ಯುದ್ಧ, ಮಾರ್ಕಂಡೇಯನ ಜನ್ಮ, ಕಾರ್ತಿಕೇಯನ ಜನನ, ರಾಮಚರಿತ, ತಾರಕಾಸುರ ವಧ— ಇತ್ಯಾದಿಗಳ ವಿಸ್ತಾರವಾದ ಕಥೆ ಇದೆ.

**ಭೂಮಿಖಂಡ :—**ಪಿತೃಭಕ್ತಿಯಿಂದ ಶಿವಶರ್ಮನಿಗೆ ಸ್ವರ್ಗ ದೊರೆತ ಕಥೆ, ಪೃಥುವಿನ ಚರಿತ್ರೆ, ಪತಿವ್ರತಾಶಿರೋಮಣಿಯಾದ ಸತೀ ಸುಕಲೆಯ ಚರಿತ್ರೆ, ಯಯಾತಿ ಮತ್ತು ಮಾತಲಿಗಳ ಆಧ್ಯಾತ್ಮವಿಚಾರ ಚರ್ಚೆ, ಚ್ಯವನ ಋಷಿಗಳ ಕಥೆ— ಇವು ವರ್ಣಿತವಾಗಿವೆ ಈ ಖಂಡದಲ್ಲಿ.

**ಸ್ವರ್ಗಖಂಡ :—**ಇಲ್ಲಿ ದೇವಲೋಕ, ಗಂಧರ್ವಲೋಕ, ಅಪ್ಸರಲೋಕ ಮತ್ತು ಯಜ್ಞಲೋಕಗಳ ವರ್ಣನೆಯೂ, ಶಕುಂತಲೋಪಾಖ್ಯಾನ ಮೊದಲಾದುವೂ ಇವೆ. ಮಹಾಭಾರತದಲ್ಲಿರುವಂತೆ ಇಲ್ಲ ಶಕುಂತಲಾ ವೃತ್ತಾಂತ ಇಲ್ಲ. ಕಾಳಿದಾಸ ಮಹಾಕವಿ ತನ್ನ ನಾಟಕಕ್ಕೆ ವಸ್ತುವನ್ನು ಇಲ್ಲಿಂದ ತೆಗೆದುಕೊಂಡಿದ್ದಾನೆಂದು ಕೆಲವರು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

**ಪಾತಾಳಖಂಡ :—**ಇಲ್ಲಿ ನಾಗಲೋಕದ ವಿಶೇಷವಾದ ವರ್ಣನೆ ಇದೆ. ರಾಮಾಯಣದ ಕಥೆ ಇದೆ. ರಘುವಂಶ ಮತ್ತು ಉತ್ತರರಾಮಚರಿತದ ಕಥೆಗೆ ಈ ಕಥೆ ಹೋಲು

ತ್ತದೆ. ವ್ಯಾಸೋಕ್ತವಾದ ಪುರಾಣಗಳಲ್ಲೆಲ್ಲಾ ಭಾಗವತ ಶ್ರೇಷ್ಠವಾದುದೆಂದು ಇಲ್ಲಿ ವರ್ಣಿಸಿದ್ದಾರೆ.

**ಉತ್ತರಖಂಡ:**—ಅನೇಕ ವಿಧವಾದ ಆಖ್ಯಾನಗಳ ಮೂಲಕ ವಿಷ್ಣು ಭಕ್ತಿಯ ಪ್ರಾಶಸ್ತ್ಯ ವರ್ಣಿತವಾಗಿದೆ ಈ ಖಂಡದಲ್ಲಿ.

ವೈಷ್ಣವ ಪುರಾಣಗಳಲ್ಲೆಲ್ಲಾ ಪದ್ಮಪುರಾಣ ದೊಡ್ಡದು. ಭಗವಂತನ ನಾಮ ಸಂಕೀರ್ತನೆಯನ್ನು ಮಾಡುವ ಕ್ರಮ ಚೆನ್ನಾಗಿ ಇಲ್ಲಿ ಹೇಳಿದೆ. ಮಾನವರು ಮಾಡಬಹುದಾದ ಅಪರಾಧಗಳ ವಿಚಾರ ತಿಳಿಸಿ ಹೇಗೆ ಅವುಗಳಿಂದ ಪಾರಾಗಬೇಕೆಂಬುದನ್ನು ವಿವರಿಸಿದೆ. ಅನೇಕಾನೇಕ ಛಂದಸ್ಸುಗಳಲ್ಲಿ ರಚಿತವಾದ ಈ ಪುರಾಣ ಕಾವ್ಯದೃಷ್ಟಿಯಿಂದಲೂ ಬಹಳ ಮನೋಹರವಾಗಿದೆ. ಇಲ್ಲಿ ಬರುವ ಸ್ತೋತ್ರವೊಂದನ್ನು ಮಾದರಿಗಾಗಿ ಉದ್ಧರಿಸಿದೆ:—

ಸಂಸಾರ ಸಾಗರಮತೀವ ಗಭೀರ ಪಾರಂ
ದುಃಖೋರ್ಮಿಭಿರ್ವಿವಿಧಮೋಹಮಯೈಸ್ತರಂಗೈಃ ।
ಸಂಪೂರ್ಣಮಸ್ತಿ ನಿಜದೋಷ ಗುಣೈಸ್ತು ಪ್ರಾಪ್ತಂ
ತಸ್ಮಾತ್ ಸಮುದ್ಧರ ಜನಾರ್ದನ ಮಾಂ ಸುದೀನಂ ॥
ಕರ್ಮಾಂಬುದೇ ಮಹತಿ ಗರ್ಜತಿ ವರ್ಷತೀವ
ವಿದ್ಯುಲ್ಲತೋಲ್ಲಸತಿ ಪಾತಕ ಸಂಚಯೈರ್ಮೇ ।
ಮೋಹಾಂಧಕಾರ ಪಟಲೈರ್ಮಯಿ ನಷ್ಟದೃಷ್ಟೇಃ
ದೀನಸ್ಯ ತಸ್ಯ ಮಧುಸೂದನ ದೇಹಿ ಹಸ್ತಂ ॥

## ವಿಷ್ಣುಪುರಾಣ

ಇದು ಪ್ರಮಾಣದಲ್ಲಿ ಚಿಕ್ಕದಾದರೂ ಪ್ರಭಾವದಲ್ಲಿ ದೊಡ್ಡದು. ಪುರಾಣಶ್ರೇಣಿಯಲ್ಲಿ ಇದಕ್ಕೆ ಪ್ರಥಮ ಸ್ಥಾನವಿದೆ. ಆರು ಅಂಶಗಳೂ, ೧೨೬ ಅಧ್ಯಾಯಗಳೂ ಇದರಲ್ಲಿವೆ. ಗಾತ್ರದಲ್ಲಿ ಭಾಗವತಕ್ಕೆ ಮೂರನೆಯ ಒಂದರಷ್ಟಿದ್ದರೂ ಅದಕ್ಕೆ ಸರಿಸಮವಾದ ಸ್ಥಾನವನ್ನೇ ಇದು ಪಡೆದಿದೆ.

**ಮೊದಲನೆಯ ಅಂಶದಲ್ಲಿ** ಸೃಷ್ಟಿವರ್ಣನೆ, ಧ್ರುವಚರಿತ್ರೆ, ಪ್ರಹ್ಲಾದಚರಿತ್ರೆಗಳೂ, **ಎರಡನೆಯ ಅಂಶದಲ್ಲಿ** ಭೂಗೋಳದ ಸಾಂಗೋಪಾಂಗ ವರ್ಣನೆಯೂ, **ಮೂರನೆಯ ಅಂಶದಲ್ಲಿ** ಆಯಾ ಆಶ್ರಮಗಳವರ ಕರ್ತವ್ಯ ವಿಚಾರವೂ, ವೇದಶಾಖೆಗಳ ವರ್ಣನೆಯೂ, **ನಾಲ್ಕನೆಯ ಅಂಶದಲ್ಲಿ** ಸೋಮವಂಶದ ಯಯಾತಿ, ಯದು, ತುರ್ವಸು, ದ್ರುಹ್ಯು, ಪುರು ಮೊದಲಾದವರ ಇತಿಹಾಸ ಕಥನವೂ, **ಐದನೆಯ ಅಂಶದಲ್ಲಿ** ವಿಸ್ತಾರವಾಗಿ ಶ್ರೀಕೃಷ್ಣನ ಚರಿತ್ರೆಯೂ, **ಆರನೆಯ ಅಂಶದಲ್ಲಿ** ಪ್ರಳಯಸ್ವರೂಪ ಮತ್ತು ಭಕ್ತಿಯ ಸ್ವರೂಪಗಳೂ ವಿವರಿಸಲ್ಪಟ್ಟಿವೆ.

ಸಾಹಿತ್ಯ ದೃಷ್ಟಿಯಿಂದ ಈ ಪುರಾಣ ಅತ್ಯಂತ ಸುಂದರವೂ, ಸರಸವೂ, ರಮಣೀಯವೂ ಆಗಿದೆ. ಅಂಗಾಂಗಿ ಭಾವದಿಂದ ಜ್ಞಾನಭಕ್ತಿಗಳ ಸಮನ್ವಯ ಬಹಳ ಚೆನ್ನಾಗಿ ಮಾಡಲಾಗಿದೆ. ಸರಳವಾದ ಭಾಷೆ, ಉನ್ನತವಾದ ಭಾವ — ಇವು ಈ ಪುರಾಣದ ವೈಶಿಷ್ಟ್ಯ. ಈ ಪುರಾಣದಿಂದ ಶ್ಲೋಕಗಳನ್ನು ಶಂಕರಾಚಾರ್ಯರು, ರಾಮಾನುಜಾಚಾರ್ಯರು ಮೊದಲಾದ ದರ್ಶನ ಸ್ಥಾಪನಾಚಾರ್ಯರುಗಳ ಉದಹರಿಸಿದ್ದಾರೆ. ಭಗವಂತನಲ್ಲಿ ಭಕ್ತಿ ಬೇಡಬೇಕಾದುದು ಹೀಗೆ:—

ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನುವರ್ತಿನಾಂ ।
ತ್ವಾಮನುಸ್ಮರತಃ ಸಾ ಮೇ ಹೃದಯಾನ್ಮಾಪ ಸರ್ಪತು ॥
ನಾಥ ಯೋನಿಸಹಸ್ರೇಷು ಯೇಷು ಯೇಷು ವ್ರಜಾಮ್ಯಹಂ ।
ತೇಷು ತೇಷ್ವಚಲಾ ಭಕ್ತಿರಚ್ಯುತಾಸ್ತು ಸದಾ ತ್ವಯಿ ॥

ಸುಂದರವಾದ ಮಾತನ್ನಾಡಿದರೆ ಇಂಥ ಫಲ ದೊರೆಯುವುದು :—

ಹಿತಂ ಮಿತಂ ಪ್ರಿಯಂ ಕಾಲೇ ವಶ್ಯಾತ್ಮಾ ಯೋಽಭಿಭಾಷತೇ ।
ಸ ಯಾತಿ ಲೋಕಾನಾಹ್ಲಾದಹೇತುಭೂತಾನ್ ನೃಪಾಽಕ್ಷಯಾನ್ ॥

## ವಾಯುಪುರಾಣ

ಈ ಪುರಾಣಕ್ಕೆ ಶಿವಪುರಾಣವೆಂಬ ಹೆಸರೂ ಉಂಟು. ಅತ್ಯಂತ ಪ್ರಾಚೀನವಾದ ಈ ಪುರಾಣದ ಉಲ್ಲೇಖ, ಶಾಂಖಾಯನ ಸೂತ್ರ, ಶತಪಥ ಬ್ರಾಹ್ಮಣಾದಿಗಳಲ್ಲಿ ದೊರಕಿದೆ. ೧೧೨ ಅಧ್ಯಾಯಗಳು ಈ ಪುರಾಣದಲ್ಲಿವೆ. ಇದು ೪ ಪಾದಗಳನ್ನು ಹೊಂದಿದೆ.—(೧) ಪ್ರಕ್ರಿಯಾಪಾದ (೨) ಅನುಷಂಗಪಾದ (೩) ಉಪೋದ್ಘಾತಪಾದ ಮತ್ತು (೪) ಉಪಸಂಹಾರಪಾದ ಎಂದು.

ಮೊದಲು ಸೃಷ್ಟಿವರ್ಣನೆ, ನಾಲ್ಕು ಆಶ್ರಮಗಳ ವರ್ಣನೆ, ಭೂಗೋಳದ ವರ್ಣನೆ, ವೇದಶಾಖೆಗಳ ಮತ್ತು ಋಷಿವಂಶಗಳ ವರ್ಣನೆ, ಶ್ರಾದ್ಧವಿಚಾರ, ಸಂಗೀತ ವಿಚಾರ ಮತ್ತು ಪ್ರಾಚೀನ ರಾಜಾಧಿರಾಜರ ವರ್ಣನೆಗಳು ಈ ಪುರಾಣದಲ್ಲಿ ಬರುವ ವಿಚಾರಗಳು. ಪರಶಿವನನ್ನು ಸ್ತುತಿಸಿ ವರ್ಣಿಸುವ ಈ ಪುರಾಣ ವಿಷ್ಣುವಿನ ವರ್ಣನೆಯನ್ನೂ ಮಾಡುತ್ತದೆ. ಪಾಶುಪತ ಯೋಗದ ನಿರೂಪಣೆ ಇದರ ವೈಶಿಷ್ಟ್ಯ. ಅನೇಕಾನೇಕ ಸುಂದರವಾದ ಸ್ತೋತ್ರಗಳು ಇಲ್ಲಿವೆ. ಮಾದರಿಗೆ ಇದು :—

ನಮಃ ಪುರಾಣಪ್ರಭವೇ ಯುಗಸ್ಯ ಪ್ರಭವೇ ನಮಃ ।
ಚತುರ್ವಿಧಸ್ಯ ಸರ್ಗಸ್ಯ ಪ್ರಭವೇಽನಂತಚಕ್ಷುಷೇ ॥
ವಿದ್ಯಾನಾಂ ಪ್ರಭವೇ ಚೈವ ವಿದ್ಯಾನಾಂ ಪತಯೇನಮಃ ।
ನಮೋ ವ್ರತಾನಾಂ ಪತಯೇ ಮಂತ್ರಾಣಾಂ ಪತಯೇನಮಃ ॥

## ಭಾಗವತಪುರಾಣ

ಇದು ಸಂಸ್ಕೃತಸಾಹಿತ್ಯದಲ್ಲಿ ಅನುಪಮವಾದ ರತ್ನ. ಭಕ್ತಿ ಶಾಸ್ತ್ರದ ಸರ್ವಸ್ವವೂ ಭಾಗವತವೇ. ಭಾರತ ರಾಮಾಯಣಗಳಿಗೆ ಸರಿದೊರೆಯೆನಿಸುವ ಮಹತ್ವ ಇದಕ್ಕಿದೆ.

ನಿಗಮಕಲ್ಪತರೋರ್ಗಳಿತಂ ಫಲಂ
    ಶುಕಮುಖಾದಮೃತ ದ್ರವಸಂಯುತಂ ।
ಪಿಬತ ಭಾಗವತಂ ರಸಮಾಲಯಂ
    ಮುಹುರಹೋ ರಸಿಕಾ ಭುವಿ ಭಾವುಕಾಃ ।

ಈ ನುಡಿ ಅಕ್ಷರಶಃ ಸತ್ಯವಾದುದು. ಭಾಗವತವು ವ್ಯಾಸರ ಸಮಾಧಿಭಾಷೆಯೆಂದು ವಲ್ಲಭಾಚಾರ್ಯರು ಹೇಳುತ್ತಾರೆ. ಈ ಮಹಾಗ್ರಂಥದ ಪ್ರಭಾವಕ್ಕೆ ವಲ್ಲಭ ಮತ್ತು ಚೈತನ್ಯ ಸಂಪ್ರದಾಯಗಳು ಪೂರ್ಣವಾಗಿ ಒಳಗಾಗಿವೆ. ಈ ಗ್ರಂಥರತ್ನಕ್ಕೆ ಶುಕ

ಪಕ್ಷೀಯ (ಸುದರ್ಶನ ಸೂರಿಗಳದು), ಭಾಗವತ ಚಂದ್ರ ಚಂದ್ರಿಕಾ (ವೀರರಾಘವಾಚಾರ್ಯರದು), ಪದರತ್ನಾವಳೀ (ವಿಜಯಧ್ವಜರದು), ಸಿದ್ಧಾಂತದೀಪ (ಶುಕ್ರಾಚಾರ್ಯರದು), ಸುಬೋಧಿನೀ (ವಲ್ಲಭಾಚಾರ್ಯರದು), ಆಧ್ಯಾತ್ಮಿಕ ಟೀಕಾ (ಗಿರಿಧರಾಚಾರ್ಯರದು), ಕ್ರಮಸಂದರ್ಭ (ಜೀವಗೋಸ್ವಾಮಿಗಳದು) ಮೊದಲಾದ ಅನೇಕಾನೇಕ ವ್ಯಾಖ್ಯಾನಗಳಿವೆ. ಶ್ರೀಧರಸ್ವಾಮಿಗಳ 'ಶ್ರೀಧರೀ' ವ್ಯಾಖ್ಯಾನ ಹೆಚ್ಚು ವ್ಯಾಪಕವಾದುದಾಗಿದೆ.

ಭಗಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಸುಕರವಾದ ಮಾರ್ಗವನ್ನು ಬೋಧಿಸುವುದೇ ಇದರ ಮಹತ್ವ. ಹೀಗೆ ಭಕ್ತಿತತ್ವ ನಿರೂಪಣ ಭಾಗವತದ ಜೀವಾಳ. ಇದನ್ನೇ ಉದ್ಧವ ಗೀತೆಯಲ್ಲಿ

"ನ ಸಾಧಯತಿ ಮಾಂ ಯೋಗೋ ನ ಸಾಂಖ್ಯಂ ಧರ್ಮ ಉದ್ಧವ।
ನ ಸ್ವಾಧ್ಯಾಯಸ್ತಪಸ್ತ್ಯಾಗೋ ಯಥಾ ಭಕ್ತಿರ್ಮಮೋರ್ಜಿತಾ ॥"

ಎಂದು ಹೇಳಿದೆ. ಭಕ್ತಿಯನ್ನು ಬಿಟ್ಟು ಇತರ ಸಾಧನೆಗಳು ವಿಡಂಬನ.

"ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ।
ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ॥
ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ವಿಡಂಬನಂ ॥"

ಮುಕ್ತಿ ಪ್ರಾಪ್ತಿಗೆ ಭಕ್ತಿಯೇ ಪ್ರಧಾನಸಾಧನವೆಂಬುದೇ ಭಾಗವತದ ಪರಮ ತತ್ವ.

"ಶ್ರೇಯಸ್ಸುತಿಂ ಭಕ್ತಿಮುದಸ್ಯ ತೇ ವಿಭೋ
ಕ್ಲಿಶ್ಯಂತಿ ಯೇ ಕೇವಲ ಬೋಧಲಬ್ಧಯೇ।
ತೇಷಾಮಸೌ ಕ್ಲೇಶಲ ಏವ ಶಿಷ್ಯತೇ
ನಾನ್ಯದ್ಯಥಾ ಸ್ಥೂಲತುಷಾವಘಾತಿನಾಂ ॥

ಭಕ್ತಿ ಸಾಧ್ಯಭಕ್ತಿ ಮತ್ತು ಸಾಧನಭಕ್ತಿ ಎಂದು ಎರಡು ಬಗೆ. ಇವುಗಳಲ್ಲಿ ಸಾಧನಭಕ್ತಿ ಒಂಬತ್ತು ವಿಧವಾಗಿದೆ:—

ಶ್ರವಣಂ ಕೀರ್ತನಂ ವಿಷ್ಣೋಃಸ್ಮರಣಂ ಪಾದಸೇವನಂ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ॥

ಇದೇ ಭಗವದ್ಗೀತೆಯಲ್ಲಿ—

'ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ'।

ಎಂದು ವರ್ಣಿತವಾಗಿದೆ.

ಸಾಧ್ಯಭಕ್ತಿ ಪ್ರೇಮಮಯವಾದುದು. ಇದರಮುಂದೆ ಮತ್ತೊಂದರ ಅರಿವೂ ಸಾಧಕನಿಗೆ ಬೇಕಾಗಿಲ್ಲ. ಭಗವಚ್ಚರಣ ಚಂಚರೀಕನಾಗಬೇಕೆಂಬ ಇವನೀಗ ಭಗವತ್ಕಾಮಿ, ಅನನ್ಯಭಕ್ತ. ಅನನ್ಯಪ್ರಯೋಜನಾದ ಇವನು ಭಗವಂತನನ್ನುಳಿದು ಮತ್ತೊಂದನ್ನೂ ಬಯಸನು.

ನ ಪಾರಮೇಷ್ಠ್ಯಂ ನ ಮಹೇಂದ್ರಧಿಷ್ಣ್ಯಂ
ನ ಸಾರ್ವಭೌಮಂ ನ ರಸಾಧಿಪತ್ಯಂ।
ನ ಯೋಗಸಿದ್ಧೀರಪುನರ್ಭವಂ ವಾ
ಮಯ್ಯರ್ಪಿತಾತ್ಮೇಚ್ಛತಿ ಮದ್ವಿನಾನ್ಯತ್ ॥

ಭಕ್ತ ಭಗವದ್ದರ್ಶನಕ್ಕೆ ಹೇಗೆ ವ್ಯಾಕುಲಗೊಳ್ಳುವನೆಂಬುದಕ್ಕೆ ನಿದರ್ಶನ—

> ಅಜಾತಪಕ್ಷಾ ಇವ ಮಾತರಂ ಖಗಾಃ
> ಸ್ತನ್ಯಂ ಯಥಾ ವತ್ಸತರಾಃ ಕ್ಷುಧಾರ್ತಾಃ ।
> ಪ್ರಿಯಂ ಪ್ರಿಯೇವ ವ್ಯುಷಿತಂ ವಿಷಣ್ಣಾ
> ಮನೋಽರವಿಂದಾಕ್ಷ ದಿದೃಕ್ಷತೇ ತ್ವಾಮ್ ॥

ಹನ್ನೆರಡು ಸ್ಕಂಧಗಳುಳ್ಳ ಈ ದಿವ್ಯಗ್ರಂಥ ವಿಷ್ಣುಪುರಾಣದ ಕಥಾಭಾಗವನ್ನೇ ಪ್ರತಿಪಾದಿಸುತ್ತದೆ. ಇದರಲ್ಲಿ ವಿಷ್ಣುಪುರಾಣ ಹರಿವಂಶಗಳಿಗಿಂತ ವಿಸ್ತಾರವಾಗಿ ಶ್ರೀಕೃಷ್ಣನ ಚರಿತ್ರೆಯು ದಶಮಸ್ಕಂಧದಲ್ಲಿ ಬಹಳ ಮನೋಜ್ಞವಾಗಿ ವರ್ಣಿಸಲ್ಪಟ್ಟಿದೆ.

ಹೀಗೆ ಭಾಗವತದ ಶ್ಲೋಕಗಳಲ್ಲಿ ವಿಚಿತ್ರವಾದ ಮಾಧುರ್ಯ ತುಂಬಿದೆ. ಭಾವ ಭಾಷೆಗಳೆರಡೂ ಉಜ್ಜ್ವಲವಾಗಿವೆ. ಅದರಿಂದಲೇ ಇದನ್ನು ಕುರಿತು ಹಿರಿಯರು ಕೆಳಗೆ ಹೇಳಿದಂತೆ ಅಭಿಪ್ರಾಯ ಪಟ್ಟಿದ್ದಾರೆ.*

> ಶ್ರೀಮದ್ಭಾಗವತಂ ಪುರಾಣಮಮಲಂ ಯದ್ವೈಷ್ಣವಾನಾಂ ಪ್ರಿಯಂ
> ಯಸ್ಮಿನ್ ಪಾರಮಹಂಸ್ಯಮೇಕಮಮಲಂ ಜ್ಞಾನಂ ಪರಂ ಗೀಯತೇ ।
> ತತ್ರ ಜ್ಞಾನವಿರಾಗಭಕ್ತಿಸಹಿತಂ ನೈಷ್ಕರ್ಮ್ಯಮಾವಿಷ್ಕೃತಂ
> ತಚ್ಛೃಣ್ವನ್ ವಿಪಠನ್ ವಿಚಾರಣಪರೋ ಭಕ್ತ್ಯಾ ವಿಮುಚ್ಯೇನ್ನರಃ ॥

## ಬೃಹನ್ನಾರದಪುರಾಣ

ಇದು ನಾರದಪುರಾಣವೆಂಬ ಉಪಪುರಾಣಕ್ಕಿಂತ ಬೇರೆಯಾದುದು. ಇದರ ಎರಡು ಭಾಗಗಳಲ್ಲಿ ಮೊದಲನೆಯದರಲ್ಲಿ ೧೨೫ ಅಧ್ಯಾಯಗಳೂ, ಎರಡನೆಯದರಲ್ಲಿ ೮೨ ಅಧ್ಯಾಯಗಳೂ ಇವೆ. ಕ್ರಿ.ಶ. ೧೧ನೆಯ ಶತಮಾನದ ಆಲ್ಬರೂನಿ ತನ್ನ ಯಾತ್ರಾ ವಿವರಣದಲ್ಲಿ ಈ ಗ್ರಂಥವನ್ನು ಉಲ್ಲೇಖಿಸಿದ್ದಾನೆ. ಕ್ರಿ.ಶ. ೧೨ನೆಯ ಶತಮಾನದ ವಲ್ಲಭಸೇನ 'ದಾನಸಾಗರ'ವೆಂಬ ತನ್ನ ಗ್ರಂಥದಲ್ಲಿ ಈ ಪುರಾಣದ ಶ್ಲೋಕಗಳನ್ನು ಉದಹರಿಸಿದ್ದಾನೆ. ಇವೆರಡು ಪ್ರಮಾಣಗಳೂ ಇದರ ಪ್ರಾಚೀನತೆಯನ್ನು ಸ್ಥಿರಪಡಿಸುವುವು.

ಇದರಲ್ಲಿ ಶ್ರಾದ್ಧವಿಚಾರ, ಪ್ರಾಯಶ್ಚಿತ್ತಾದಿಗಳು, ವೇದಾಂಗಗಳ ವಿವೇಚನೆ, ವಿಷ್ಣು, ರಾಮ, ಹನುಮಾನ್, ಕೃಷ್ಣ, ಕಾಳೀ, ಮಹೇಶ—ಮೊದಲಾದ ದೇವತಾಕವಾದ ಮಂತ್ರಗಳ ವಿಧ್ಯುಕ್ತವಾದ ನಿರೂಪಣೆ, ಇವು ವರ್ಣಿತವಾಗಿವೆ. ವಿಷ್ಣುಭಕ್ತಿ ಮುಕ್ತಿಗೆ

---

* ಭಾಗವತ ಮಹಾಪುರಾಣವೆಂಬುದು ಇದೇಯೆ ಅಥವಾ ದೇವೀ ಭಾಗವತ ಪುರಾಣವೇ ಎಂಬ ಅಂಶ ಕೆಲವರಿಂದ ಚರ್ಚಿತವಾಗಿದೆ. ಈ ಭಾಗವತ ಪುರಾಣ ಅರ್ವಾಚೀನವೆಂದೂ ವೈಯ್ಯಾಕರಣ ಬೋಪದೇವ ಕೃತವೆಂದೂ ವಿಲ್ಸನ್ ಮೊದಲಾದ ಪಾಶ್ಚಿಮಾತ್ಯ ಪಂಡಿತರ ಅಭಿಪ್ರಾಯ. ಆದರೆ ಇದು ಸರಿಯಲ್ಲವೆಂದೂ ಶ್ರೀಮನ್ಮಧ್ವಾಚಾರ್ಯರು ಭಾಗವತವನ್ನು ಉದಹರಿಸುವುದರಿಂದಲೂ, ಮಹಾಭಾರತಕ್ಕೆ ಸಮನಾದ ಪವಿತ್ರತೆ ಒಪ್ಪಿರುವುದರಿಂದಲೂ ಏನೆಂದರೂ ಹತ್ತನೆಯ ಶತಮಾನಕ್ಕಿಂತ ಈಚಿನದಲ್ಲವೆಂದು ವಿಂಟರ್ ನಿಟ್ಸರ ಅಭಿಪ್ರಾಯ. ಶ್ರೀ ಶಂಕರಾಚಾರ್ಯರೂ, ಶ್ರೀ ರಾಮಾನುಜಾಚಾರ್ಯರೂ ಭಾಗವತದಿಂದ ಉದಹರಿಸದೇ ಇರುವುದು ಗಮನಾರ್ಹವಾಗಿದೆ. ಬೃಹದಾರಣ್ಯಕ ಶ್ಲೋಕ ವಾರ್ತಿಕ ಸಂಗ್ರಹದಲ್ಲಿ ಶ್ರೀ ವಿದ್ಯಾರಣ್ಯರು ಭಾಗವತದ ಶ್ಲೋಕವೊಂದನ್ನು ಉದಹರಿಸಿದ್ದಾರೆ. ಆದರೆ ಸಂಪ್ರದಾಯಕ್ಕನುಗುಣವಾಗಿ ಭಾಗವತ ಅತ್ಯಂತ ಪ್ರಾಚೀನವೆಂಬ ಭಾವನೆಯೇ ದೃಢವಾಗಿದೆ.

ಸಾಧನವೆಂಬುದು ಇದರ ಮತ. ಅಷ್ಟಾದಶಪುರಾಣಗಳ ವರ್ಣನೆಯೂ, ಅನುಕ್ರಮಣಿಕೆಯೂ ಇದರಲ್ಲಿ ದೊರೆಯುವುದರಿಂದ ಇದು ಐತಿಹಾಸಿಕ ಮಹತ್ವವನ್ನು ಹೊಂದಿದೆ. ಮೂಲಪುರಾಣಗಳ ರೂಪುರೇಖೆಗಳ ವಿಚಾರ ಇದರಿಂದ ತಿಳಿಯಬರುತ್ತದೆ.

## ಮಾರ್ಕಂಡೇಯಪುರಾಣ

ಅತಿ ಪ್ರಾಚೀನವಾದ ಈ ಪುರಾಣವನ್ನು ಮಾರ್ಕಂಡೇಯರು ಹೇಳಿದುದರಿಂದ ಈ ಹೆಸರು ಬಂದಿದೆ. ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ಈ ಪುರಾಣದ ಶ್ಲೋಕಗಳನ್ನು ಉದಹರಿಸಿದ್ದಾರೆ. ಇದರಲ್ಲಿ ೧೩೮ ಅಧ್ಯಾಯಗಳಿವೆ, ಆಂಗ್ಲ, ಜರ್ಮನ್ ಮೊದಲಾದ ಭಾಷೆಗಳಿಗೂ ಇದು ಅನುವಾದ. • ಬ್ರಹ್ಮವಾದಿನಿ ಮದಾಲಸೆಯು ತನ್ನ ಮಗನಾದ ಅಲರ್ಕನಿಗೆ ಶೈಶವದಲ್ಲಿಯೇ ಬ್ರಹ್ಮೋಪದೇಶ ಮಾಡಿದ ಕಥೆ ಇದರಲ್ಲಿದೆ. ದುರ್ಗಾಸಪ್ತಶತೀ ಎಂಬುದು ಈ ಪುರಾಣದ ವೈಶಿಷ್ಟ್ಯ.

## ಅಗ್ನಿಪುರಾಣ

ಇದನ್ನು ಸಮಸ್ತ ಭಾರತೀಯ ವಿದ್ಯೆಗಳ ಜ್ಞಾನಕೋಶವೆಂದು ಕರೆಯಬಹುದು. ಇದರಲ್ಲಿ ೩೮೩ ಅಧ್ಯಾಯಗಳಿವೆ. ಇದರಲ್ಲಿ ಅಡಕವಾಗದ ವಿಚಾರವೇ ಇಲ್ಲ. ಸಂಗ್ರಹವಾಗಿ ಅವತಾರಗಳ ನಿರೂಪಣೆ ಮಾಡಿ ರಾಮಾಯಣ ಭಾರತಗಳ ಕಥೆಗಳನ್ನು ದೀರ್ಘವಾಗಿ ವಿವರಿಸಲಾಗಿದೆ. ಮಂದಿರ ನಿರ್ಮಾಣ, ಪ್ರತಿಷ್ಠಾ ಮತ್ತು ಪೂಜಾ ಕ್ರಮಗಳ ವಿಚಾರವನ್ನೂ ಜ್ಯೋತಿಷ, ಧರ್ಮಶಾಸ್ತ್ರ, ರಾಜನೀತಿ, ಆಯುರ್ವೇದ, ವ್ರತವಿಚಾರ ಮೊದಲಾದುವನ್ನೂ ವಿಸ್ತಾರವಾಗಿ ವರ್ಣಿಸಿದ್ದಾರೆ. ಅಲಂಕಾರಶಾಸ್ತ್ರ, ವ್ಯಾಕರಣಶಾಸ್ತ್ರ, ಯೋಗಶಾಸ್ತ್ರ, ಯಮ ನಿಯಮಾದಿಗಳ ಸ್ವರೂಪ ವರ್ಣನೆ ಮೊದಲಾದುವೂ, ಕೊನೆಯಲ್ಲಿ ಅದ್ವೈತ ವೇದಾಂತದ ಸಿದ್ಧಾಂತಸಾರದ ಸಂಕಲನವೂ ಇವೆ. ಅಲ್ಲದೆ ಅಧ್ಯಾಯವೊಂದರಲ್ಲಿ ಭಗವದ್ಗೀತೆಯ ಸಾರಾಂಶವೂ ಕೊಡಲ್ಪಟ್ಟಿದೆ.

ಈ ಪುರಾಣಗಳಲ್ಲಿ ಉಪಲಬ್ಧವಾಗಿರುವ ಇತರ ಶಾಸ್ತ್ರ ವಿಚಾರಗಳು ಕಾಲಕ್ರಮೇಣ ಇದಕ್ಕೆ ಸೇರಿಸಲ್ಪಟ್ಟವೆಂದು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಅಂತೂ ಸರ್ವ ವಿದ್ಯೆಗಳ ವಿವರವೂ ಇಲ್ಲಿರುವುದರಿಂದಲೇ—

"ಆಗ್ನೇಯೇ ಹಿ ಪುರಾಣೇಽಸ್ಮಿನ್ ಸರ್ವೇ ವಿದ್ಯಾಃ ಪ್ರದರ್ಶಿತಾಃ"

ಎಂದು ಹಿರಿಯರು ಹೇಳುತ್ತಾರೆ.

## ಭವಿಷ್ಯಪುರಾಣ

ಮುಂದೆ ನಡೆಯುವ ಘಟನೆಗಳ ವಿಚಾರವಿಲ್ಲಿ ಬರುವುದರಿಂದಲೇ ಇದಕ್ಕೆ ಈ ಹೆಸರು ಬಂದಿತೆಂದು ಕಾಣುತ್ತದೆ. ಇದರಲ್ಲಿ ಆಗ್ನೇಯರ ಆಗಮನದ ವಿಚಾರವೂ ಬರುತ್ತದೆ. ಸೂರ್ಯ ಪೂಜೆಯನ್ನು ಇಲ್ಲಿ ವಿವೇಚಿಸಿದೆ. ಈ ಪುರಾಣದ ಅನೇಕ ಭಾಗಗಳು ಕಾಲಕ್ರಮದಲ್ಲಿ ಅನೇಕರಿಂದ ಸೇರಿಸಲ್ಪಟ್ಟವೆಂದು ಊಹಿಸಬಹುದು.

## ಬ್ರಹ್ಮವೈವರ್ತಪುರಾಣ

ಇದರಲ್ಲಿ ನಾಲ್ಕು ಖಂಡಗಳಿವೆ—ಬ್ರಹ್ಮಖಂಡ, ಪ್ರಕೃತಿಖಂಡ, ಗಣೇಶಖಂಡ ಮತ್ತು ಕೃಷ್ಣಜನ್ಮಖಂಡ ಎಂದು. ಕೊನೆಯ ಖಂಡವೇ ಬಹಳ ದೊಡ್ಡದು. ಮೊದಲನೆಯ ಖಂಡದಲ್ಲಿ ಕೃಷ್ಣನಿಂದ ಜಗತ್ತು ಸೃಷ್ಟಿಯಾಯಿತೆಂದು ವಿವರಿಸಲಾಗಿದೆ. ಈ ಖಂಡದಲ್ಲಿ ಆಯುರ್ವೇದ ಶಾಸ್ತ್ರದ ವರ್ಣನೆ ಬರುತ್ತದೆ. ಎರಡನೆಯ ಖಂಡದಲ್ಲಿ ಪ್ರಕೃತಿಯು ಕೃಷ್ಣನ ಆದೇಶಕ್ಕನುಸಾರ ಆಯಾ ಕಾಲದಲ್ಲಿ ಲಕ್ಷ್ಮೀ, ಸರಸ್ವತೀ, ಸಾವಿತ್ರೀ ಮತ್ತು ರಾಧೆಯ ರೂಪದಲ್ಲಿ ಪರಿವರ್ತನೆಯನ್ನು ಹೊಂದುವುದೆಂದು ಹೇಳಿದೆ. ವಿಸ್ತಾರವಾಗಿ ಸಾವಿತ್ರಿಯ ಉಪಾಖ್ಯಾನ ಮತ್ತು ತುಲಸೀ ಕಥೆ ಇಲ್ಲಿ ಬಂದಿವೆ. ಗಣೇಶಖಂಡದಲ್ಲಿ ಗಣಪತಿಯ ಜನನ ವಿಚಾರ, ಮಹಿಮೆ ಮತ್ತು ಚರಿತ್ರೆಯು ವರ್ಣಿತವಾಗಿದೆ. ಕೃಷ್ಣನೇ ಗಣೇಶನ ರೂಪವನ್ನು ಹೊಂದಿ ಅವತರಿಸಿದನೆಂದು ಇಲ್ಲಿ ಹೇಳಿದೆ. ಎಲ್ಲವೂ ಕೃಷ್ಣನ ಮುಖೇನ ಆಯಿತೆಂಬುದು ಇದರ ಸಾರಾಂಶ. ನಾಲ್ಕನೆಯ ಖಂಡ ಕೃಷ್ಣಚರಿತ್ರೆಗೆ ಮೀಸಲಾಗಿದೆ. ರಾಧೆಯ ವರ್ಣನೆಯೂ ರಾಧಾಕೃಷ್ಣರ ಪ್ರೇಮವೂ ಇಲ್ಲಿ ಚೆನ್ನಾಗಿ ಚಿತ್ರಿತವಾಗಿದೆ.

ಅಂತೂ ಈ ಪುರಾಣದ ಜೀವಾಳವೇನೆಂದರೆ—

ವಿವೃತಂ ಬ್ರಹ್ಮ ಕಾರ್ತ್ಸ್ನ್ಯೇನ ಕೃಷ್ಣೇನೈವ ಚ ಶೌನಕ ।
ಬ್ರಹ್ಮವೈವರ್ತಕಂ ತೇನ ಪ್ರವದಂತಿ ಪುರಾವಿದಃ ॥

ಗೌಡ ವೈಷ್ಣವರಲ್ಲಿ ಈ ಪುರಾಣ ಬಹಳ ಪ್ರಚಾರದಲ್ಲಿದೆ.

## ಲಿಂಗಪುರಾಣ

ಈ ಪುರಾಣಕ್ಕೆ ಈ ಹೆಸರು ಬರಲು ಕಾರಣ ಅಲ್ಲಿಯೇ ಹೀಗೆ ಹೇಳಿದೆ—

" ಲಿಂಗಸ್ಯ ಚರಿತೋಕ್ತತ್ವಾತ್ ಪುರಾಣಂ ಲಿಂಗಮುಚ್ಯತೇ "

ಈ ಪುರಾಣದಲ್ಲಿ ಭಗವಂತನಾದ ಶಂಕರನನ್ನು ಲಿಂಗರೂಪದಿಂದ ಉಪಾಸನೆ ಮಾಡುವ ವಿಚಾರ ವಿವೇಚಿಸಲಾಗಿದೆ. ೧೬೩ ಅಧ್ಯಾಯಗಳುಳ್ಳ ಈ ಪುರಾಣ ಪೂರ್ವಭಾಗ ಮತ್ತು ಉತ್ತರಭಾಗ ಎಂದು ಎರಡು ಭಾಗಗಳಲ್ಲಿದೆ. ಭಗವಾನ್ ಶಂಕರನ ದ್ವಾರಾ ಸೃಷ್ಟಿಯನ್ನೂ, ಶಂಕರನ ೨೮ ಅವತಾರಗಳ ವರ್ಣನೆಯನ್ನೂ, ಶೈವವ್ರತಗಳು ಮತ್ತು ತೀರ್ಥಗಳ ವಿವೇಚನೆಯನ್ನೂ ಇಲ್ಲಿ ಮಾಡಲಾಗಿದೆ. ಈ ಪುರಾಣದ ಉತ್ತರಭಾಗದಲ್ಲಿ ಪಶು, ಪಾಶ ಮತ್ತು ಪಶುಪತಿಗಳ ವಿಚಾರ ವಿವರಿಸಲಾಗಿದೆ.

## ವರಾಹಪುರಾಣ

ಇದು ವರಾಹಾವತಾರವನ್ನು ವಿವೇಚಿಸುವುದರಿಂದ ಈ ಹೆಸರು ಬಂದಿದೆ. ಈ ಪುರಾಣ ಗೌಡೀಯ ಮತ್ತು ದಾಕ್ಷಿಣಾತ್ಯಗಳೆಂಬ ಎರಡು ಪಾಠಗಳಲ್ಲಿದೆ. ೧೩ನೆಯ ಶತಮಾನದ ಹೇಮಾದ್ರಿ ತನ್ನ ಚತುರ್ವರ್ಗಚಿಂತಾಮಣಿಯಲ್ಲಿ ಈ ಪುರಾಣದಲ್ಲಿ ಬರುವ ಬುದ್ಧದ್ವಾದಶಿಯ ವಿಚಾರವನ್ನು ಹೇಳುತ್ತಾನೆ. ಹಾಗೆಯೇ ಗೌಡನರೇಶನಾದ ಬಲ್ಲಾಳಸೇನನು ತನ್ನ 'ದಾನಸಾಗರ'ವೆಂಬ ಗ್ರಂಥದಲ್ಲಿ ಈ ಪುರಾಣದ ಶ್ಲೋಕಗಳನ್ನು ಉದ್ಧರಿ

ಸಿದ್ಧಾನೆ. ಇದರಲ್ಲಿ ೨೧೮ ಅಧ್ಯಾಯಗಳಿವೆ. ಮಧುರೆಯ ಮಾಹಾತ್ಮ್ಯ ಮತ್ತು ನಚಿಕೇತೋಪಾಖ್ಯಾನಗಳು ಈ ಪುರಾಣದ ವೈಶಿಷ್ಟ್ಯ ಸ್ವರ್ಗ ಮತ್ತು ನರಕಗಳ ವರ್ಣನೆ ಇಲ್ಲಿ ವಿಸ್ತಾರವಾಗಿ ಕೊಡಲಾಗಿದೆ.

## ಸ್ಕಂದಪುರಾಣ

ಪುರಾಣಗಳಲ್ಲೆಲ್ಲಾ ಇದುಅತ್ಯಂತ ದೊಡ್ಡದು. ಭಾಗವತದ ಎಂಟರಷ್ಟಿದೆ ಈ ಪುರಾಣ. ಈ ಪುರಾಣದೊಳಗೆ ಅನೇಕ ಸಂಹಿತೆಗಳೂ, ಖಂಡಗಳೂ, ಮಾಹಾತ್ಮ್ಯಗಳೂ ಅಡಕವಾಗಿವೆ. ಹೀಗೆ ಅಂತರ್ಗತವಾಗಿರುವ ಸಂಹಿತೆಗಳಲ್ಲಿ ಪ್ರಖ್ಯಾತವಾದ ಸೂತ ಸಂಹಿತೆಯೂ ಒಂದು. ಕಾರ್ತಿಕೇಯ ಸ್ವಾಮಿಯು ಈ ಪುರಾಣದಲ್ಲಿ ಶಿವತತ್ವ ನಿರೂಪಣೆ ಮಾಡುವುದರಿಂದ ಇದಕ್ಕೆ ಸ್ಕಂದಪುರಾಣವೆಂಬ ಹೆಸರು ಬಂದಿತು. ಶೈವಪುರಾಣಗಳಲ್ಲಿ ಇದು ಅನುಪಮವಾದುದು. ಶಿವಮಾಹಾತ್ಮ್ಯ, ಜ್ಞಾನಯೋಗಖಂಡ, ಮುಕ್ತಿಖಂಡ, ಯಜ್ಞವೈಭವಖಂಡ ಮೊದಲಾದ ಭಾಗಗಳು ಇದರಲ್ಲಿವೆ. ಅತ್ಯಂತ ಪ್ರಸಿದ್ಧವಾದ ಈ ಪುರಾಣದಲ್ಲಿ ಮಾಹೇಶ್ವರ, ವೈಷ್ಣವ, ಬ್ರಹ್ಮ, ಕಾಶೀ, ರೇವಾ, ಅವಂತಿ, ತಾಪೀ ಮತ್ತು ಪ್ರಭಾಸ ಖಂಡಗಳಿವೆ. ಪರಶಿವನ ಮಹಿಮೆಯನ್ನು ಸವಿಸ್ತಾರವಾಗಿ ವರ್ಣಿಸುವುದಿದು. ಶಿವನ ಕೃಪೆಯೇ ಎಲ್ಲ ಮಂಗಳಕ್ಕೂ ಮೂಲವೆಂಬ ಭಾವ ಈ ಪುರಾಣದಲ್ಲಿದೆ. ಕೆಳಗಿನ ಶ್ಲೋಕಗಳು ಈ ಭಾವವನ್ನೇ ತೋರುವುವು.

ಪ್ರಸಾದಲಾಭಾಯ ಹಿ ಧರ್ಮಸಂಚಯಃ
    ಪ್ರಸಾದಲಾಭಾಯ ಹಿ ದೇವತಾರ್ಚನಂ ।
ಪ್ರಸಾದಲಾಭಾಯ ಹಿ ದೇವತಾಸ್ಮೃತಿಃ
    ಪ್ರಸಾದಲಾಭಾಯ ಹಿ ಸರ್ವಮೀರಿತಂ ॥
ಶಿವಪ್ರಸಾದೇನ ವಿನಾ ನ ಭುಕ್ತಯಃ
    ಶಿವಪ್ರಸಾದೇನ ವಿನಾ ನ ಮುಕ್ತಯಃ ।
ಶಿವಪ್ರಸಾದೇನ ವಿನಾ ನ ದೇವತಾಃ
    ಶಿವಪ್ರಸಾದೇನ ಹಿ ಸರ್ವಮಾಸ್ತಿಕಾಃ ॥

## ವಾಮನಪುರಾಣ

ಇದು ವಾಮನಾವತಾರಕ್ಕೆ ಸಂಬಂಧಿಸಿದ ಪುರಾಣ. ಇದರಲ್ಲಿ ೯೫ ಅಧ್ಯಾಯಗಳಿವೆ. ವಿಷ್ಣುವಿನ ಬೇರೆಬೇರೆ ಅವತಾರಗಳ ವರ್ಣನೆಯೂ ಇಲ್ಲಿ ಬರುತ್ತದೆ. ಪರಮೇಶ್ವರನ ಮಾಹಾತ್ಮ್ಯ, ಶೈವತೀರ್ಥ ಮಹಿಮೆ, ಪಾರ್ವತೀಪರಮೇಶ್ವರರ ವಿವಾಹ, ಗಣೇಶ ಜನನ, ಕಾರ್ತಿಕೇಯನ ಚರಿತ್ರೆ–ಇವೆಲ್ಲಾ ಈ ಪುರಾಣದಲ್ಲಿ ದೊರೆಯುತ್ತವೆ.

## ಕೂರ್ಮಪುರಾಣ

ಈ ಪುರಾಣದಲ್ಲಿ ಬ್ರಾಹ್ಮೀ, ಭಾಗವತೀ, ಸೌರೀ ಮತ್ತು ವೈಷ್ಣವೀ ಎಂದು ನಾಲ್ಕು ಸಂಹಿತೆಗಳು ಇದ್ದವಂತೆ. ಕೆಳಗಿನ ಶ್ಲೋಕಗಳಿಂದ ಈ ಅಂಶ ತಿಳಿಯುವುದು.

ಬ್ರಾಹ್ಮೀ ಭಾಗವತೀ ಸೌರೀ ವೈಷ್ಣವೀ ಚ ಪ್ರಕೀರ್ತಿತಾ ।
ಚತಸ್ರಃ ಸಂಹಿತಾಃ ಪುಣ್ಯಾಃ ಧರ್ಮಕಾಮಾರ್ಥಮೋಕ್ಷದಾಃ ॥

ಈಗ ಉಪಲಬ್ಧವಾಗಿರುವುದು ೬೦೦೦ ಶ್ಲೋಕಗಳುಳ್ಳ ಬ್ರಾಹ್ಮೀ ಸಂಹಿತೆಯೊಂದೇ. ಈಗ ಉಪಲಬ್ಧವಾಗಿರುವ ಕೂರ್ಮಪುರಾಣದ ಆದಿಯಲ್ಲಿ ಈ ಅಂಶವೂ ಹೇಳಿದೆ—

"ಇಯಂತು ಸಂಹಿತಾ ಬ್ರಾಹ್ಮೀ ಚತುರ್ವೇದೈಶ್ಚ ಸಮ್ಮಿತಾ ।
ಭವಂತಿ ಷಟ್ಸಹಸ್ರಾಣಿ ಶ್ಲೋಕಾನಾಮತ್ರ ಸಂಖ್ಯಯಾ ॥"

ಈ ಪುರಾಣದಲ್ಲಿ ಪರಶಿವನ ಪಾರಮ್ಯವನ್ನು ಮೊದಲಿಂದಲೂ ಕೊಂಡಾಡಲಾಗಿದೆ. ಪೂರ್ವಭಾಗದಲ್ಲಿ ಸೃಷ್ಟಿಕ್ರಮ, ಪಾರ್ವತಿಯ ತಪಶ್ಚರ್ಯೆ, ಕಾಶೀಪ್ರಯಾಗಗಳ ಮಾಹಾತ್ಮ್ಯ ಉತ್ತರಭಾಗದಲ್ಲಿ ಈಶ್ವರೀಗೀತೆ ಮತ್ತು ವ್ಯಾಸಗೀತೆಗಳೂ ಇವೆ.

## ಮತ್ಸ್ಯಪುರಾಣ

ಈ ಪುರಾಣದಲ್ಲಿ ೨೯೧ ಅಧ್ಯಾಯಗಳಿವೆ. ಮನ್ವಂತರಗಳ ಸಾಮಾನ್ಯ ವರ್ಣನೆ, ಪಿತೃವರ್ಗಗಳ ವರ್ಣನೆ, ಶ್ರಾದ್ಧಕಲ್ಪವಿವೇಚನೆ, ಸೋಮವಂಶದ ಅರಸರ ವರ್ಣನೆ, ವ್ರತಗಳ ವರ್ಣನೆ, ಪ್ರಯಾಗಕ್ಷೇತ್ರಮಾಹಾತ್ಮ್ಯ, ಶಿವ–ತ್ರಿಪುರಾಸುರರ ಯುದ್ಧ ಮೊದಲಾದುವು ವರ್ಣಿತವಾಗಿವೆ. ಸಮಸ್ತ ಪುರಾಣಗಳ ವಿಷಯಾನುಕ್ರಮಣಿಕೆ ಇಲ್ಲಿ ದೊರೆಯುವುದು. ಭೃಗು, ಅಂಗೀರಸ್, ಕಶ್ಯಪ, ವಸಿಷ್ಠ, ಪರಾಶರ, ಅಗಸ್ತ್ಯ ಮೊದಲಾದ ಋಷಿಗಳ ವಂಶ ವರ್ಣನೆ ಇದೆ. ದೈವ, ಪುರುಷಕಾರ, ಸಾಮ, ದಾನ, ಭೇದ, ದಂಡ, ದುರ್ಗ, ಯಾತ್ರೆ, ಸಹಾಯಸಂಪತ್ತಿ ಮೊದಲಾದುವುಗಳನ್ನು ವಿವೇಚಿಸುವ ರಾಜಧರ್ಮದ ವರ್ಣನೆಯೂ ಇಲ್ಲಿ ದೊರೆಯುವುದು. ಅಲ್ಲದೆ ಪ್ರತಿಮಾಲಕ್ಷಣ, ವಿವಿಧ ದೇವತಾಮೂರ್ತಿಗಳ ಪ್ರತಿಮಾ ನಿರ್ಮಾಣ ವಿಚಾರ, ಪೀಠನಿರ್ಮಾಣ ಮೊದಲಾದ ಅಂಶಗಳೆಲ್ಲಾ ಇಲ್ಲಿ ದೊರೆಯುವುವು.

## ಗರುಡಪುರಾಣ

ಭಗವಾನ್ ವಿಷ್ಣು ಗರುಡನಿಗೆ ವಿಶ್ವಸೃಷ್ಟಿಯ ವಿಚಾರವನ್ನರುಹುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ೨೮೭ ಅಧ್ಯಾಯಗಳುಳ್ಳ ಈ ಪುರಾಣದಲ್ಲಿ ಎರಡು ಖಂಡಗಳಿವೆ. ಪೂರ್ವಖಂಡದಲ್ಲಿ ಅನೇಕ ವಿದ್ಯೆಗಳ ವರ್ಣನೆ, ವಿಷ್ಣುವಿನ ಅವತಾರ ಮಾಹಾತ್ಮ್ಯದ ವಿಚಾರ ಮತ್ತು ರತ್ನ, ಮುತ್ತು, ಪದ್ಮರಾಗ, ಮರಕತ, ಇಂದ್ರನೀಲ, ವೈಡೂರ್ಯ, ಪುಷ್ಯರಾಗ, ಕರಕೇತನ, ಭೀಷ್ಮರತ್ನ, ಪುಲಕ, ಸ್ಫಟಿಕ, ವಿದ್ರುಮ ಮೊದಲಾದುವುಗಳ ಪರೀಕ್ಷಾ ವಿಚಾರವೂ ಉಕ್ತವಾಗಿದೆ. ಅಲ್ಲದೆ ರಾಜನೀತಿ, ಆಯುರ್ವೇದ, ಪಶುವೈದ್ಯ ಮೊದಲಾದುವೂ ಇದರಲ್ಲಿ ಸೇರಿವೆ. ಆಯುರ್ವೇದಕ್ಕೆ ಸಂಬಂಧಿಸಿದಂತೆ ೫೦ ಅಧ್ಯಾಯಗಳಿವೆ. ಇದರೊಡನೆ ಸಾಂಖ್ಯಯೋಗದ ವರ್ಣನೆ, ಛಂದಃಶಾಸ್ತ್ರ ವಿಚಾರ, ಭಗವದ್ಗೀತೆಯ ಸಾರಾಂಶ ಕಥನ— ಮೊದಲಾದುವೂ ಇವೆ. ಹೀಗೆ ಸಮಸ್ತ ವಿದ್ಯೆಗಳ ವಿಚಾರವನ್ನು ಹೊಂದಿರುವ ಈ ಭಾಗ ಅಗ್ನಿಪುರಾಣವನ್ನು ಹೋಲುತ್ತದೆ.

ಈ ಪುರಾಣದ ಉತ್ತರಖಂಡಕ್ಕೆ ಪ್ರೇತಕಲ್ಪವೆಂದು ಹೆಸರು. ಮರಣಾನಂತರ ಜೀವನ ಸ್ಥಿತಿಗತಿಗಳ ವಿಚಾರವಿಲ್ಲಿದೆ. ಶ್ರಾದ್ಧ ಸಮಯದಲ್ಲಿ ಈ ಪುರಾಣವನ್ನು ಓದಿಸುವ ಪದ್ಧತಿ ಅನೇಕರಲ್ಲಿದೆ.

## ಬ್ರಹ್ಮಾಂಡಪುರಾಣ

ಸಮಸ್ತ ಬ್ರಹ್ಮಾಂಡದ ವರ್ಣನೆಯನ್ನು ಕೊಡುವುದರಿಂದ ಈ ಪುರಾಣಕ್ಕೆ ಈ ಹೆಸರು ಬಂದಿದೆ. ಇದರಲ್ಲಿ ಪ್ರಪಂಚದ ವರ್ಣನೆಯನ್ನೇ ಮಾಡಲಾಗಿದೆ. ನಾರದ ಪುರಾಣದಲ್ಲಿ ಇದರ ವಿಚಾರ ಹೇಳುತ್ತಾ ಇದರಲ್ಲಿ ಪ್ರಕ್ರಿಯಾ, ಅನುಷಂಗ, ಉಪೋದ್ಘಾತ ಮತ್ತು ಉಪಸಂಹಾರ ಪಾದಗಳೆಂಬ ನಾಲ್ಕು ಪಾದಗಳಿದ್ದವೆಂದು ತಿಳಿಸುತ್ತಾರೆ.

'ಶೃಣು ವತ್ಸ ಪ್ರವಕ್ಷ್ಯಾಮಿ ಬ್ರಹ್ಮಾಂಡಾಖ್ಯಂ ಪುರಾತನಂ।
ಯಚ್ಚ ದ್ವಾದಶಸಾಹಸ್ರಂ ಭಾವಿಕಲ್ಪಕಥಾಯುತಂ ॥
ಪ್ರಕ್ರಿಯಾಖ್ಯೋಽನುಷಂಗಾಖ್ಯಃ ಉಪೋದ್ಘಾತಸ್ತೃತೀಯಕಃ।
ಚತುರ್ಥ ಉಪಸಂಹಾರಃ ಪಾದಾಶ್ಚತ್ವಾರ ಏವಹಿ' ॥

ಆದರೆ ಈಗ ಉಪಲಬ್ಧವಾಗಿರುವುದು ಪ್ರಕ್ರಿಯಾ ಮತ್ತು ಉಪೋದ್ಘಾತ ಪಾದಗಳು ಮಾತ್ರ. ಇದಕ್ಕೆ ವಾಯುವೀಯ ಬ್ರಹ್ಮಾಂಡಪುರಾಣವೆಂಬ ಹೆಸರೂ ಇದ್ದಿತೆಂದ ಕೂರ್ಮಪುರಾಣದಿಂದ ತಿಳಿದುಬರುತ್ತದೆ. ಈಗ ದೊರಕಿರುವ ಭಾಗಗಳಲ್ಲಿ ಭೂಗೋಳದ ವಿಸ್ತಾರವಾದ ಆದರೆ ರಸಮಯವಾದ ವರ್ಣನೆಯೂ, ಗ್ರಹ, ನಕ್ಷತ್ರ, ಯುಗಗಳು ಮೊದಲಾದುವುಗಳ ವರ್ಣನೆಯೂ, ಭಾರತವರ್ಷದ ಪ್ರಸಿದ್ಧ ಕ್ಷತ್ರಿಯ ವಂಶಗಳ ವರ್ಣನೆಯೂ ಇವೆ. ಕ್ರಿ. ಶ. ೫ನೆಯ ಶತಮಾನದಲ್ಲಿಯೇ ಈ ಪುರಾಣ ಜಾವಾ ದ್ವೀಪದಲ್ಲಿ ಪ್ರಚಾರದಲ್ಲಿತ್ತೆಂಬುದೂ, ಅಲ್ಲಿನ ದೇಶಭಾಷೆಗೆ ಇದು ಪರಿವರ್ತಿತವಾಗಿತ್ತೆಂಬುದೂ ಇದರ ವೈಶಿಷ್ಟ್ಯವನ್ನು ತಿಳಿಸುವುದು.

## ಉಪಸಂಹಾರ

ಪ್ರಖ್ಯಾತವಾದ ಅಷ್ಟಾದಶ ಪುರಾಣಗಳಲ್ಲಡಗಿರುವ ವಿಚಾರಗಳನ್ನು ಅತ್ಯಂತ ಸಂಗ್ರಹವಾಗಿ ನಿರೂಪಿಸಲಾಯಿತು. ಇದರ ಸಮೀಕ್ಷೆಯಿಂದಲೂ ಪುರಾಣಗಳ ಮಹತ್ವ ಗೋಚರಿಸದಿರದು. ಪುರಾಣಗಳಲ್ಲಿ ಸಿಕ್ಕುವ ಅನೇಕಾನೇಕ ಕಥಾನಕಗಳ ಆಧಾರದ ಮೇಲೆ ನಮ್ಮ ನಾಡಿನ ಕವಿಶ್ರೇಷ್ಠರು ಉತ್ತಮೋತ್ತಮವಾದ ಕಾವ್ಯಗಳನ್ನು ರಚಿಸಿದರು. ಭಾರತ ರಾಮಾಯಣಗಳಂತೆ ಪುರಾಣಗಳೂ ಸಹ ಉಪಜೀವ್ಯ ಗ್ರಂಥಗಳಾದವು.

ಹೀಗೆ ಪುರಾಣಗಳು ವಸ್ತುವೈವಿಧ್ಯದಿಂದಲೂ, ಲಲಿತವಾದ ಭಾಷಾ ಮರ್ಯಾದೆಯಿಂದಲೂ, ಮನೋಹರವಾದ ಕಾವ್ಯಪದ್ಧತಿಯಿಂದಲೂ ತ್ರಿವೇಣೀ ಸಂಗಮದಂತೆ ಪವಿತ್ರವೂ, ಮನೋಹರವೂ, ಬೋಧಪ್ರದವೂ ಆಗಿರುವುದರಿಂದಲೇ ಸರ್ವರ ಆದರಕ್ಕೂ ಅರ್ಹವಾಗಿ ಎಂದಿನಿಂದಲೂ ನಮ್ಮ ನಾಡಿನ ಜನತೆಗೆ ದಾರಿ ದೀಪಗಳಾಗಿ ಮಾರ್ಗದರ್ಶಕವಾಗಿವೆ. ಆದರಿಂದಲೇ ಪುರಾಣಗಳ ಅನುಶೀಲನೆ ಅತ್ಯಂತ ಆವಶ್ಯಕ.

---

# ಕುಂದಗನ್ನಡ

**ಶ್ರೀ ಬಿ. ಎಚ್. ಶ್ರೀಧರ, ಎಂ.ಎ.**

ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ಪ್ರದೇಶದಲ್ಲಿ ಆಡುವ ಕನ್ನಡದ ಉಪಭಾಷೆಯು ಭಾಷಾಶಾಸ್ತ್ರದ ಅಭ್ಯಾಸಿಗಳಿಗೆ ಕುತೂಹಲವನ್ನುಂಟುಮಾಡೀತು. ಪಾಣಿನಿಯ ಪ್ರತ್ಯಾಹಾರಗಳಂತೆ ಇಡಿ ಪದಗಳ ಹ್ರಸ್ವೀಕರಣವಾದುದಕ್ಕೆ ಅದರಲ್ಲಿ ಬಹಳ ದೃಷ್ಟಾಂತಗಳು ಸಿಗುತ್ತವೆ. 'ಆಗುತ್ತದೆ' ಎಂಬುದು 'ಆಗ್ತದೆ', 'ಆಗುತ್ತೆ' ಎಂದು ಅನುಕ್ರಮವಾಗಿ ಉತ್ತರ ಕರ್ನಾಟಕ ಹಾಗೂ ಮೈಸೂರುಗಳಲ್ಲಿ ರೂಪಾಂತರ ಹೊಂದಿದರೆ ಕುಂದಗನ್ನಡದಲ್ಲಿ 'ಅತ್ತು' (Ātt-u) ಎಂಬ ಅತಿ ಚಿಕ್ಕ ರೂಪವನ್ನು ಹೊಂದುತ್ತದೆ. ಕನ್ನಡದ ಇತರ ಉಪಭಾಷೆಗಳಲ್ಲಿ ವಿರಳವಾದ ಒ (Hot, Cot ಮುಂತಾದವುಗಳಲ್ಲಿರುವಂತಹ ಒಕಾರ) ಎಂಬ ಸ್ವರದ ಬಳಕೆ ಹೊ (Ho)=ಹೋ (ಸಂಬೋಧನಾರ್ಥಕ) ಮುಂತಾದ ಪದಗಳಲ್ಲಿರುವುದು ಈ ಕನ್ನಡದ ವೈಶಿಷ್ಟ್ಯ. ಕೊಡಿರಿ, ಮಾಡಿರಿ ಮುಂತಾದ ಬಹುವಚನದ ಕ್ರಿಯಾಪದಗಳ ರಿಕಾರಕ್ಕೆ ನಿಕಾರ ಆದೇಶವಾಗುವುದೂ ಇಲ್ಲಿ ಸಹಜ. ಹಾಗೇ ಕೊಡಲು, ಬಿಡಲು, ಮಾಡಲು ಮೊದಲಾದ ಕೃದಂತಗಳ ರೂಪಗಳು ಕೊಡುಕೆ, ಬಿಡುಕೆ, ಮಾಡುಕೆ ಎಂದು ಮುಂತಾಗಿ ಆದೇಶಗಳನ್ನು ಹೊಂದುವುದು ಇಲ್ಲಿಯ ರೂಢಿ. ಆಶೀರ್ವಿಧಿಯಲ್ಲಿಯೂ ಕ್ರಿಯಾಪದಗಳು ಉಕ್ತರೂಪಗಳನ್ನು ಹೊಂದುತ್ತವೆ. 'ಅವನು ಸಾಯಲಿ' ಎಂಬುದು 'ಅವ ಸಾವುಕೆ–ಸಾವ್ಕೆ' ಎಂದಾಗುತ್ತದೆ.

ಸಂವೃತಪ್ರಯತ್ನದಿಂದ ಉಚ್ಚರಿಸುವ ಅಕಾರ ಅನೇಕ ಪದಗಳ ಅಂತ್ಯದಲ್ಲಿ ಆದೇಶವಾಗುವುದುಂಟು. **ಉದಾ :** ಅಕ್ಕು=ಅಕ್ಕ; ಹೊದಕಲು=ಹೊದಕ್ಲ, ಬರ್ಕು=ಬಕ್ಕ, ಹೋಕು=ಹೋಕ ಇತ್ಯಾದಿ. ಇಲ್ಲಿ ಕೊನೆಯ ಉಕಾರಕ್ಕೆ ಆದೇಶವಾಗಿ ಬಂದ ಸಂವೃತ ಅಕಾರದ ಪ್ರಭಾವ ಪೂರ್ವಾಕ್ಷರದಲ್ಲಿಯ ಅಕಾರಕ್ಕು ತಾಗುತ್ತದೆ. ಅದರಿಂದ ಆ ಅಕ್ಷರ ಅಕಾರಾಂತವಾಗಿದ್ದರೆ ಅದೂ ಸಂವೃತ ಅಕಾರವಾಗುತ್ತದೆ. ಊರಿನ ರಕಾರದಮೇಲಿನ ಅಕಾರ ಸಂವೃತವಾದರೆ ಪಟ್ಟಣದ ಣಕಾರದಮೇಲಿನ ಅಕಾರಕ್ಕೆ ಒಕಾರಾದೇಶ ಬಂದು ಪ್ರಥಮಾ ವಿಭಕ್ತಿಯಲ್ಲದು 'ಪಟ್ಣೋ' ಎಂದಾಗುತ್ತದೆ. ಈ ಮಾದರಿಯ ಬದಲಾವಣೆಗಳೂ ಕುಂದಗನ್ನಡದಲ್ಲಿ ಅನೇಕವಾಗಿವೆ. ಈ ಮುಂದೆ ಕೆಲವು ಧಾತುಗಳನ್ನು ನಡೆಸಿ ತೋರಿಸಲಾಗಿದೆ. ಅವು ಉಪಲಕ್ಷಣ ಮಾತ್ರ. ದ್ರಾವಿಡ ಭಾಷಾಶಾಸ್ತ್ರದ ಅಭ್ಯಾಸಿಗಳು ಈ ಕ್ಷೇತ್ರದಲ್ಲಿ ಕುತೂಹಲ ತಾಳಲೆಂದು ಈ ಪುಟ್ಟ ಲೇಖನವನ್ನು ಬರೆಯಲಾಗಿದೆ. ಕುಂದಾಪುರದ ಈ ಉಪಭಾಷೆ ಇಂದು ವ್ಯವಹಾರದಲ್ಲಿರುವಂಥದು. ಅಲ್ಲಿಯ ಜನ ಇದನ್ನು ನೀರು ಕುಡಿದಂತೆ ಆಡುತ್ತಾರೆ.

## I

೧. **ಹೋಗು :**

**ವರ್ತಮಾನಕಾಲ—**

| ಏಕವಚನ. | ಬಹುವಚನ. |
|---|---|
| ನಾ ಹೋತೆ (Hot-e) | ನಾವ್ ಹೋತೋ Hot-o) |
| ನೀ ಹೋತೆ (Hot-e) | ನೀವ್ ಹೋತ್ರಿ (Hot-ri) |
| ಅವ ಹೋತ (Hot-a) | ಅವ್ರ್ ಹೋತ್ರ್ (Hotṛ) |

ಭೂತಕಾಲ—

| | |
|---|---|
| ನಾ ಹೋದೆ (Hod-e) | ನಾವ್ ಹೋದೋ (Hod-o) |
| ನೀ ಹೋದೆ (Hod-e) | ನೀವ್ ಹೋದ್ರಿ (Hod-ri) |
| ಅವ ಹೋದ (Hod-a) | ಅವ್ರು ಹೋದ್ರು (Hod-r̥) |

೨. ಬರು :

ವರ್ತಮಾನಕಾಲ—

| | |
|---|---|
| ನಾ ಬತ್ತೆ | ನಾವ್ ಬತ್ತೊ (Batt-o) |
| ನೀ ಬತ್ತೆ | ನೀವ್ ಬತ್ರಿ |
| ಅವ ಬತ್ತ | ಅವ್ರು ಬತ್ರು |

ಭೂತಕಾಲ—

| | |
|---|---|
| ನಾ ಬಂದೆ | ನಾವ್ ಬಂತ (Bant-u) |
| ನೀ ಬಂದೆ | ನೀವ್ ಬಂದ್ರಿ |
| ಅವ ಬಂದ | ಅವ್ರು ಬಂದ್ರು |

೩. ಕಾಣ್ :

ವರ್ತಮಾನಕಾಲ—

| | |
|---|---|
| ನಾ ಕಾತೆ | ನಾವ್ ಕಾತೊ (Kāt-o) |
| ನೀ ಕಾತ | ನೀವ್ ಕಾತ್ರಿ |
| ಅವ ಕಾತ | ಅವ್ರು ಕಾತ್ರು |

ಭೂತಕಾಲ—

| | |
|---|---|
| ನಾ ಕಂಡೆ | ನೀವ್ ಕಂಡ್ತ (Kandt-u) |
| ನೀ ಕಂಡೆ | ನೀವ್ ಕಂಡ್ರಿ |
| ಅವ ಕಂಡ | ಅವ್ರು ಕಂಡ್ರು |

೪. ಕೇಳ್ ;

ವರ್ತಮಾನಕಾಲ—

| | |
|---|---|
| ನಾ ಕೇತೆ | ನಾವ್ ಕೇಡ್ತ (Kedt-u) |
| ನೀ ಕೇತೆ | ನೀವ್ ಕೇತ್ರಿ |
| ಅವ ಕೇತ | ಅವ್ರು ಕೇತ್ರು |

ಭೂತಕಾಲ—

| | |
|---|---|
| ನಾ ಕೇಡೆ | ನಾವ್ ಕೇಡ್ತು (Kedt-u) |
| ನೀ ಕೇಡೆ | ನೀವ್ ಕೇಡ್ರಿ |
| ಅವ ಕೇಡ | ಅವ್ರು ಕೇಡ್ರು |

## II ವಿಧ್ಯರ್ಥ

೧. ಹೋಗು : ಹೋಯ್ಕ್=ಹೋಗಬೇಕು=ಹೋಗತಕ್ಕದ್ದು.

| | |
|---|---|
| ನಾ ಹೋಯ್ಕ್ (Hoik) | ನಾವ್ ಹೋಯ್ಕ್ (Hoik) |
| ನೀ ಹೋಯ್ಕ್ (Hoik) | ನೀವ್ ಹೋಯ್ಕ್ (Hoik) |
| ಅವ ಹೋಯ್ಕ್ (Hoik) | ಅವ್ರು ಹೋಯ್ಕ್ (Hoik) |

೨. ಬರು : ಬರ್ಕ್=ಬರಬೇಕು

೩. ಕಾಣ್ : ಕಾಣ್ಕ್=ಕಾಣಬೇಕು

೪. ಕೇಳ್ : ಕೇಣ್ಕ್=ಕೇಳಬೇಕು

೫. ತರು : ತರ್ಕ್=ತರಬೇಕು

೬. ಹೊರು : ಹೊರ್ಕ್=ಹೊರಬೇಕು

## III ಭವಿಷ್ಯಾರ್ಥ

೧. ಹೋಗು :

| | |
|---|---|
| ನಾ ಹೋವೆ | ನಾವ್ ಹೋಪೊ (Hop-o) |
| ನೀ ಹೋವೆ | ನೀವ್ ಹೋಪ್ರಿ |
| ಅವ ಹೋಪ | ಅವ್ರು ಹೋವ್ರು |

೨. ಬರು :

| | |
|---|---|
| ನಾ ಬಪ್ಪೆ | ನಾವ್ ಬಪ್ಪೊ |
| ನೀ ಬಪ್ಪೆ | ನೀವ್ ಬಪ್ರಿ |
| ಅವ ಬಪ್ಪ | ಅವ್ರ್ ಬಪ್ರು |

೩. ಕಾಣ್ :

| | |
|---|---|
| ನಾ ಕಾಬೆ | ನಾವ್ ಕಾಬೊ |
| ನೀ ಕಾಬೆ | ನೀವ್ ಕಾಬ್ರಿ |
| ಅವ ಕಾಬ | ಅವ್ರು ಕಾಬ್ರು |

೪. ಕೇಳ್ :

| | |
|---|---|
| ನಾ ಕೇಬೆ | ನಾವ್ ಕೇಬೊ |
| ನೀ ಕೇಬೆ | ನೀವ್ ಕೇಬ್ರಿ |
| ಅವ ಕೇಬ | ಅವ್ರು ಕೇಬ್ರು |

## IV ಸಂಭಾವನಾರ್ಥ

ಭವಿಷ್ಯಾರ್ಥದಂತೆಯೇ. ಆದರೆ ನಾವ್ ಬಂದಾಗ ಮಾತ್ರ ಹೊಕ್ಕ (Hok-u), ಬಕ್ಕ (Bakk-u), ಕಾಙ್ಗ (Kaṇg-u), ಕೇಙ್ಗ (Keṇg-u), ತಕ್ಕ (Takk-u), ಹೊರ್ಗ (Horgnu) ಎಂದಾಗುತ್ತದೆ.

# ಮಸ್ಕಿ ಗ್ರಾಮ ಮತ್ತು ಹೆಸರು

**(ಚಾರಿತ್ರಿಕ ವಿಮರ್ಶೆ)**

**ಶ್ರೀ ದೇಸಾಯಿ ಪಾಂಡುರಂಗರಾಯರು,** ಎಂ.ಎ., ಉದಕಮಂಡಲ

ಹೈದರಾಬಾದ ರಾಜ್ಯದ ರಾಯಚೂರು ಜಿಲ್ಲೆಯಲ್ಲಿ ಮಸ್ಕಿ ಎಂಬ ಗ್ರಾಮವಿದೆ. ಇದು ಅಶೋಕನ ಶಾಸನವೇ ಮೊದಲಾದ ಪ್ರಾಚೀನ ಅವಶೇಷಗಳಿಂದಾಗಿ ಚರಿತ್ರೆಯಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಆ ಮುಂಚೆ ಅಶೋಕನ ಅನೇಕ ಶಾಸನಗಳು ದೊರೆತಿದ್ದರೂ ಈ ರಾಜನು ಅಶೋಕನೇ ಎಂಬ ನಿಶ್ಚಿತ ಮತ್ತು ನಿಸ್ಸಂಧಿಗ್ಧ ಪ್ರಮಾಣವನ್ನು ಮೊದಲು ಬಾರಿ ಒದಗಿಸಿದ ಕಾರಣದಿಂದ ಮಸ್ಕಿಯ ಅಶೋಕನ ಶಾಸನಕ್ಕೆ ಪ್ರಾಮುಖ್ಯತೆ ಉಂಟಾಗಿದೆ.

ಅಶೋಕನಿಂದ ಈಚೆಯ ಕಾಲಕ್ಕೆ ಬರಲು, ಕಲ್ಯಾಣ ಚಾಲುಕ್ಯ ವಂಶದ ಒಂದನೆಯ ಜಯಸಿಂಹ ಜಗದೇಕಮಲ್ಲನ ಶಾಸನಗಳು ಮಸ್ಕಿಯಲ್ಲಿ ದೊರೆತಿವೆ. ಈ ರಾಜನು ಕ್ರಿ. ವ. ಸು. ೧೦೧೫ ರಿಂದ ೧೦೪೨ರ ವರೆಗೆ ರಾಜ್ಯಭಾರ ಮಾಡಿದನು. ಈ ಶಾಸನಗಳಲ್ಲಿ ಈ ಊರನ್ನು 'ರಾಜಧಾನಿ ಪಿರಿಯ ಮೊಸಂಗಿ' ಎಂದು ಸಂಬೋಧಿಸಿದೆ. ಇಂಥ ಒಬ್ಬ ರಾಜನ ಇಲ್ಲವೆ ಸಾಮಂತನ ರಾಜಧಾನಿ ಇದೆಂದು ಅವುಗಳಲ್ಲಿ ಉಕ್ತವಾಗದೆ ಇದ್ದ ಕಾರಣದಿಂದ, ಈ ಗ್ರಾಮವು ಈ ಕಾಲದಲ್ಲಿ ಸಾಮಾನ್ಯವಾಗಿ ಪ್ರಾದೇಶಿಕ ಆಡಳಿತದ ಮುಖ್ಯಸ್ಥಳವಾಗಿದ್ದಿತು ಎಂದು ಇಟ್ಟುಕೊಳ್ಳಬೇಕಾಗುತ್ತದೆ.

ಹೆಚ್ಚು ಕಡಿಮೆ ಇದೇ ಕಾಲದ ಚೋಳರಾಜರ ತಮಿಳು ಶಾಸನಗಳಲ್ಲಿ ಈ ಸ್ಥಳವನ್ನು 'ಮುಸಂಗಿ' ಎಂದು, 'ಮುಯಂಗಿ' ಎಂದು ಹೆಸರಿಸಿದೆ. ಈ ಗ್ರಾಮದ ಪಕ್ಕದಲ್ಲಿ ಚಾಲುಕ್ಯ ಮತ್ತು ಚೋಳ ರಾಜರ ದಂಡುಗಳ ನಡುವೆ ಯುದ್ಧವು ನಡೆಯಿತೆಂದು ತಮಿಳು ಶಾಸನಗಳು ಸಾರುತ್ತವೆ.

ಇನ್ನೂ ಈಚೆಗೆ ಬರಲು, ವಿಜಯನಗರ ಕಾಲದಲ್ಲಿಯೂ ಈ ಗ್ರಾಮವು ಪ್ರಾಂತೀಯ ರಾಜ್ಯಭಾರದ ಕೇಂದ್ರವಾಗಿ ಖ್ಯಾತಿವೆತ್ತಂತೆ ಗೋಚರವಾಗುತ್ತದೆ. ಇಲ್ಲಿ ದೊರೆತ ಸದಾಶಿವರಾಯನ ಒಂದು ಶಾಸನದಲ್ಲಿ (ಕ್ರಿ. ವ. ಸು. ೧೫೪೭) ಈ ಪ್ರದೇಶವನ್ನು 'ಮೊಸಗೆ ಸೀಮೆ' ಎಂದು ನಿರ್ದೇಶಿಸಿದೆ. ಕಳೆದ ೧೯ನೆಯ ಶತಮಾನದಲ್ಲಿ ಜನಗಳು ಈ ಊರನ್ನು 'ಮುಸ್ಕಿ' ಎಂದು ಕರೆಯುತ್ತಿದ್ದರಾಗಿ ತಿಳಿಯುತ್ತದೆ.[೧]

ಮೇಲಿನ ಪರಿಶೀಲನದಿಂದ ಗ್ರಹಿಸಬಹುದಾದ ಅಂಶವು ಹೀಗೆ. ಈ ಗ್ರಾಮದ ಸು. ೧೧ನೆಯ ಶತಮಾನದಷ್ಟು ಪ್ರಾಚೀನ ಕಾಲದ ಹೆಸರು 'ಮೊಸಂಗಿ'. ಮುಂದೆ ಅದು ಉಚ್ಚಾರಣೆಯಲ್ಲಿ ಪರಿವರ್ತನ ಹೊಂದುತ್ತ, 'ಮೊಸಗೆ', 'ಮುಸ್ಕಿ', ಮುಂತಾಗಿ

---

೧ ಮಸ್ಕಿಯ ಕೆಲವು ಶಾಸನಗಳನ್ನು ಸಂಪಾದಿಸಿ, ಈ ಗ್ರಾಮದ ಚರಿತ್ರೆ ಮತ್ತು ಹೆಸರಿನ ವಿಮರ್ಶೆಯನ್ನು ಹೆಚ್ಚು ವಿಶದವಾಗಿ A Corpus of Inscriptions in the Kannada Districts of Hyderabad ಎಂಬ ಗ್ರಂಥದಲ್ಲಿ ಮಾಡಿದ್ದೇನೆ. ಈ ಗ್ರಂಥವು ಹೈದರಾಬಾದ ಪುರಾತತ್ತ್ವ ವಿಭಾಗದಿಂದ ಕ್ಷಿಪ್ರದಲ್ಲಿ ಪ್ರಕಟವಾಗಲಿದೆ.

ರೂಪಾಂತರಗಳನ್ನು ಧರಿಸಿ ಕೊನೆಗೆ 'ಮಸ್ಕಿ' ಎಂಬ ಸಂಕ್ಷಿಪ್ತ ಪದವಾಯಿತು. ಪೂರ್ವದ ಶಾಸನಗಳಲ್ಲಿ ಈ ಗ್ರಾಮದ ಹೆಸರು 'ಮೊಸಂಗಿ' ಎಂದು ದೊರೆಯುತ್ತದೆ; 'ಮಾಸಂಗಿ' ಎಂದು ದೊರೆತಿಲ್ಲ. ಒಂದು ಶಾಸನದಲ್ಲಿ ಮಾತ್ರ ಒಂದು ಕಡೆ 'ಮೊಸಂಗಿ' ಎಂಬ ಪದವನ್ನು 'ಮಾಸಂಗಿ' ಎಂಬುದಾಗಿ ಓದಬಹುದೇ ಎಂಬ ಅನುಮಾನಕ್ಕೆ ಅವಕಾಶವಿದೆ. ಆದರೆ ಇದು ಸಂದಿಗ್ಧ.

ಈಗ ಒಂದು ಜಿಜ್ಞಾಸೆ. ಈ 'ಮೊಸಂಗಿ' ಪದಕ್ಕೆ ಏನಾದರೂ ಅರ್ಥವಿರಬಹುದೆ? ಈ ಹೆಸರಿನ ನಿಷ್ಪತ್ತಿಯನ್ನು ಕಂಡು ಹಿಡಿಯಲು ಸಾಧ್ಯವೆ? ಈ ವಿಚಾರವನ್ನು ಎತ್ತಿಕೊಂಡು ಮಾನ್ಯ ಮಿತ್ರರೊಬ್ಬರು ಒಂದು ಮಹತ್ತ್ವದ ಸಂದರ್ಭದಲ್ಲಿ ಹೀಗೆ ವಾದಿಸಿದ್ದಾರೆ.೧

"ಮಸ್ಕಿ ಎಂಬ ಊರಿಗೆ ಮಾಸಂಗಿ ಎಂಬ ಹೆಸರು ಇದ್ದಿತು. ಇದು ಶಾಸನಗಳಲ್ಲಿ ದೊರೆಯುತ್ತದೆ. ಮಾಸಂಗಿ ಮಹಾಸಂಘ—ಮಹಾಸಂಘಿ ಎಂಬುದರ ರೂಪಾಂತರ. ಇದು ಬೌದ್ಧಕಾಲದ ಹೆಸರು. ಅಶೋಕನ ಕಾಲದಲ್ಲಿ ಬುದ್ಧ ಭಿಕ್ಷುಗಳ ಸಂಘಗಳು ಬುದ್ಧ ಮತದ ಪ್ರಚಾರಕ್ಕೆ ಕೇಂದ್ರಗಳಾಗಿದ್ದುವು, ಇಂಥ ಕೇಂದ್ರಗಳಲ್ಲಿ ಮಸ್ಕಿಯು ಒಂದು ಕೇಂದ್ರವಾಗಿತ್ತು. ಅಲ್ಲಿ ಮಹಾಸಂಘವೊಂದು ಇದ್ದಿರಬೇಕು. ಅದೇ ಆ ಊರಿಗೆ ಹೆಸರಾಯಿತು. ಅಶೋಕ ರಾಜನೇ ಈ ಸಂಘಗಳ ಪೋಷಕನು ಅಧ್ಯಕ್ಷನು. ಆತನು ಮಸ್ಕಿಯ ಮಹಾಸಂಘಕ್ಕೆ ಅಧ್ಯಕ್ಷನಾಗಿ ಅಲ್ಲಿ ಎಷ್ಟು ಸಭೆಗಳನ್ನು ನಡೆಸಿದನೋ!"

ಈ ಪ್ರತಿಪಾದನೆ ಹಲವು ದೃಷ್ಟಿಯಿಂದ ಪ್ರಶ್ನಾರ್ಹವಾಗಿದೆ. ಒಂದನೆಯದಾಗಿ, ಮಸ್ಕಿಯ ಪೂರ್ವದ ಹೆಸರು 'ಮಾಸಂಗಿ' ಎಂದಿದ್ದಿತು ಎಂಬ ಮಾತು ಶಂಕಾಸ್ಪದ. ಎರಡನೆಯದಾಗಿ, ಅದು 'ಮಹಾಸಂಘಿ' ಎಂಬ ಮೂಲದಿಂದ ಬಂದಿದೆ ಎಂಬ ಕಲ್ಪನೆಗೆ ಆಧಾರವಿಲ್ಲ. ಮೂರನೆಯದಾಗಿ, ಇಂಥ ನಿರಾಧಾರದ ಊಹೆಯನ್ನು ಆಧರಿಸಿ, ಮಸ್ಕಿಯಲ್ಲಿ ಬುದ್ಧಾನುಯಾಯಿಗಳು ಬಹುವಾಗಿ ನೆಲಸಿದ್ದರು, ಇಲ್ಲಿ ಬೌದ್ಧ ಮಹಾಸಂಘವು ಉತ್ಕರ್ಷಗೊಂಡಿತ್ತು; ಮುಂತಾಗಿ ಕಾವ್ಯಧಾಟಿಯಲ್ಲಿ ಬಣ್ಣಿಸಿದರೆ ಅದು ಎಷ್ಟರಮಟ್ಟಿಗೆ ವಿಶ್ವಸನೀಯವಾದೀತು ಎಂಬ ಸಂದೇಹ.

ನನಗೆ ತಿಳಿದಮಟ್ಟಿಗೆ ಮಸ್ಕಿಯಲ್ಲಿ ಅಶೋಕನ ಶಾಸನವೊಂದನ್ನು ಬಿಟ್ಟರೆ, ಬೌದ್ಧಮತದ ಕುರುಹುಗಳು ದೊರೆತಿಲ್ಲ. ಅಶೋಕನ ಶಾಸನವಿದ್ದ ಎಡೆಗಳಲ್ಲೆಲ್ಲ ಬೌದ್ಧಮತೀಯರು ನೆಲಸಿರಬೇಕು ಎಂಬ ಊಹೆಗೆ ಯುಕ್ತಿ ಮತ್ತು ಅನುಭವದ ಬೆಂಬಲವಿಲ್ಲ.೨ ಈ ಅಂಶ ಅಶೋಕನ ಶಾಸನಗಳ ಉದ್ದೇಶ ಮತ್ತು ಅವು ದೊರೆತ ಸ್ಥಳಗಳ ಚರಿತ್ರೆಯನ್ನು ಪರಾಮರ್ಶಿಸಿದರೆ ಸ್ಫುಟವಾಗುತ್ತದೆ. ಇದರ ವಿವರಣೆ ಇಲ್ಲಿ ಅನಾವಶ್ಯಕ.

ಗ್ರಾಮನಾಮಗಳಿಗೆಲ್ಲ ಮೂಲವನ್ನು ಕಂಡುಹಿಡಿಯುವುದಾಗಲಿ, ನಿಷ್ಪತ್ತಿಯನ್ನು ಸೂಚಿಸುವುದಾಗಲಿ, ಸುಲಭವಲ್ಲ. ಆದರೂ ಪ್ರಾಕೃತಿಕ, ಚಾರಿತ್ರಕ, ಮೊದಲಾದ ಘಟನೆ

೧ ಪ್ರಬಂಧಮಾಲೆ (ಕರ್ನಾಟಕ ಸಾಹಿತ್ಯ ಮಂದಿರ, ಹೈದರಾಬಾದ, ೧೯೫೪), ಪು. ೧೯.

೨ ಈ ಮಾದರಿಯ ಊಹೆಯು ಕೈವಾಡ 'ಚಿತ್ರದುರ್ಗ ಜಿಲ್ಲೆಯಲ್ಲಿ ಬೌದ್ಧ ಧರ್ಮದ ಕುರುಹುಗಳು' ಎಂಬ ಲೇಖನದಲ್ಲಿಯೂ (ಶರಣ ಸಾಹಿತ್ಯ, ಜ್ಯೂನ-ಜುಲೈ ೧೯೫೬) ಕಾಣಿಸಿಕೊಳ್ಳುತ್ತದೆ. ಉದಾ. ಅಸಗಗೋಡು, ಶ್ಯಾಬನೂರು, ಮುಂತಾದ ಸ್ಥಳಗಳ ವಿವೇಚನೆಯನ್ನು ನೋಡಿ.

ಗಳ ಸಹಾಯದಿಂದ ಕೆಲಹೆಸರುಗಳ ನಿಷ್ಪತ್ತಿಯನ್ನು ಸಮಂಜಸವಾಗಿ ತೋರಿಸಲು ಸಾಧ್ಯವಿದೆ. ಪ್ರಸ್ತುತ ಸಂದರ್ಭದಲ್ಲಿ ಇಂಥದೊಂದು ಪ್ರಯತ್ನವನ್ನು ಮಾಡಬಹುದು.

ಮಸ್ಕಿ ಗಾಮವು ಪ್ರಾಕೃತಿಕ ವೈಶಿಷ್ಟ್ಯವುಳ್ಳದು. ಈ ಗ್ರಾಮದ ಪರಿಸರದಲ್ಲಿ ಬಿಡಿಬಿಡಿಯಾದ ಬೆಟ್ಟಗಳು ಮತ್ತು ಅವುಗಳ ಗೋಪುರದಂಥ ಉನ್ನತ ಶಿಖರಗಳು ಪ್ರೇಕ್ಷಕರ ಮನವನ್ನು ಸೆಳೆದುಕೊಳ್ಳುತ್ತವೆ. ಈ ವೈಲಕ್ಷಣ್ಯದ ಮೂಲಕ ಈ ಊರಿಗೆ ಮೊದಲು 'ಮಹಾಶೃಂಗಿ' ಎಂಬ ಹೆಸರು ಉಂಟಾಗಿರುವುದು ಸಂಭವನೀಯವಾಗಿದೆ. 'ಮಹಾಶೃಂಗಿ'ಯ ತದ್ಭವ 'ಮಾಸಂಗಿ', ಅನಂತರ ಅದು 'ಮೊಸಂಗಿ' ಆಗಿರಬಹುದು. ಈ ಸಂದರ್ಭದಲ್ಲಿ ಅ–ಆತ್ವಕ್ಕೆ ಒತ್ವ ಉಂಟಾದಂತಹ ಕನ್ನಡದಲ್ಲಿಯ ಭಾಷಾ ಪ್ರಯೋಗಗಳನ್ನು ಲಕ್ಷಿಸಬಹುದು. ಉದಾಹರಣಾರ್ಥವಾಗಿ; ಮಾತ್ರ > ಮೊತ್ತ, ಗೆಯ್ದಂ > ಗೆಯ್ದೊಂ ಮಗಿಲ್ > ಮೊಗಳು (ridge of the roof of a house). ಊರ ಹೆಸರಿನಲ್ಲಿಯ 'ಶೃಂಗಿ' ಎಂಬ ಪದ 'ಸಂಗಿ' ಎಂಬುದಾಗಿ ಮಾರ್ಪಟ್ಟುದರ ಒಂದು ನಿದರ್ಶನ 'ಸಿರಸಂಗಿ' (ಬೆಳಗಾವ ಜಿಲ್ಲೆ) ಈ ಗ್ರಾಮ ನಾಮದಲ್ಲಿಯೂ ದೊರೆಯುತ್ತದೆ. ಶಾಸನದ ಆಧಾರದಂತೆ 'ಸಿರಸಂಗಿ'ಯ ಪೂರ್ವದ ಹೆಸರು 'ಋಷ್ಯಶೃಂಗಿ' ಆಗಿದ್ದಿತು. ಸಾರಾಂಶ, ಮಸ್ಕಿಯ ಮೂಲ 'ಮಹಾಶೃಂಗಿ' ಎಂದು ಸೂಚಿಸಿದರೆ ಸಯುಕ್ತಿಕವಾದೀತು. ಮಸ್ಕಿ ಗ್ರಾಮವನ್ನು ನಾನು ಸಂದರ್ಶಿಸಿದ್ದೇನೆ. ಅಲ್ಲಿಯ ಪ್ರಾಚೀನ ಅವಶೇಷಗಳನ್ನು ಅವಲೋಕಿಸಿದ್ದೇನೆ. ಮೇಲಿನ ಸಂಕ್ಷಿಪ್ತ ವಿಮರ್ಶೆ ಸಾಕ್ಷಾತ್ ಪರಿಚಯ ಮತ್ತು ವ್ಯಾಸಂಗದ ಫಲವಾಗಿದೆ.

# ಹೊಸಗನ್ನಡ ಛಂದೋವಿಕಾಸ

## ಶ್ರೀ ಬಿ. ಎಚ್. ಶ್ರೀಧರ, ಎಂ.ಎ. ಅವರು

ಛಂದಸ್ಸು ಪದ್ಯವನ್ನು ಗದ್ಯದಿಂದ ಪ್ರತ್ಯೇಕಿಸುವ ಅವಚ್ಛೇದಕ. ಈ ಅವಚ್ಛೇದಕವನ್ನಿಟ್ಟುಕೊಳ್ಳದೆ ಹೋದರೆ ಪದ್ಯ-ಗದ್ಯಗಳೆಂಬ ಪದಗಳನ್ನು ಭಿನ್ನಪದಾರ್ಥ ವಾಚಕಗಳೆಂದು ತಿಳಿದು ಬಳಸುವುದು ತಪ್ಪಾಗುತ್ತದೆ. ಈಯೆರಡಕ್ಕೂ ಇತರ ಕಾವ್ಯ ಅಥವಾ ಸಾಹಿತ್ಯ ಲಕ್ಷಣಗಳು ಸಾಧಾರಣ; ಪದ್ಯವೂ ಕಾವ್ಯವೇ, ಗದ್ಯವೂ ಕಾವ್ಯಜಾತಿಯದಾಗಿರಬಲ್ಲುದು. ಅಕ್ಷರ ಅಥವಾ ಮಾತ್ರೆಗಳ ಗಣಿತಕ್ಕೊಳಪಡುವುದು ಭಾರತೀಯ ಛಂದಸ್ಸು. ಇಂಥ ಗಣಿತ ನಿಯಮವಿಲ್ಲದಲ್ಲಿ ಯಾವ ವಿಶೇಷಣಯುಕ್ತವಾಗಿಯೂ ಛಂದೋಮುದ್ರೆಯಿದೆ ಎಂದು ಹೇಳಲು ಸಾಧ್ಯವಿಲ್ಲ. ಕಾವ್ಯಲಕ್ಷಣವೊಂದೂ ಇಲ್ಲದ ಪದ್ಯಗಳಿರಬಹುದು. ಆದರೆ ಛಂದೋಬದ್ಧವಿಲ್ಲದ್ದನ್ನು ಗದ್ಯವೆನ್ನುವುದು ಅನಿವಾರ್ಯ. ಅದರಿಂದಲೇ ಛಂದಸ್ಸು ಪದ್ಯದ ಅವಚ್ಛೇದಕ ಅಥವಾ Differentia.

ಛಂದಸ್ಸು ಭಾವವ್ಯಂಜಕವೂ ನಿಯತವರ್ಣವಿನ್ಯಾಸವುಳ್ಳದ್ದೂ ಆದ ವಾಕ್ಯದ ಆಚ್ಛಾದಕ, ಕಟ್ಟು ಎನಿಸಿರುವುದು ಸುಪ್ರಸಿದ್ಧ. ವರ್ಣವಿನ್ಯಾಸದ ಸ್ಪಷ್ಟನಿಯಮವು ಛಂದಸ್ಸಿನ ತಿರುಳು. ಅಕ್ಷರ-ಮಾತ್ರೆಗಳ ರೂಪದ ವರ್ಣವು ತನ್ನ ಉಚ್ಚಾರಣೆಯ ಕಾಲಮಾನದಿಂದ ಗಣಿತಕ್ಕೆ ಸಿಕ್ಕುತ್ತದೆ, ಸ್ಪಷ್ಟನಿಯಮಕ್ಕೊಳಗಾಗುತ್ತದೆ. ಅಕ್ಷರಗಣ-ಮಾತ್ರಾಗಣಗಳೆರಡೂ ಹೀಗೆ ಕಾಲಮಾನಕ್ಕೆ ಅಧೀನ. ಆದುದರಿಂದ ಕಾಲನಿಯಮ ಛಂದೋಬದ್ಧ ಪದಪಂಕ್ತಿಗಳಲ್ಲಿ ಅಪರಿಹಾರ್ಯ.

ಬರೆದ ಅಕ್ಷರಗಳು ಯಾಂತ್ರಿಕ ಚಿಹ್ನಗಳು. ಅವುಗಳ ಬೆಲೆ ಶ್ರುತಿಗುಣಕ್ಕೆ ಅಧೀನ. ಉಚ್ಚಾರಣೆ ಅವುಗಳ ನಾದವನ್ನು, ಕರ್ಣಗ್ರಾಹ್ಯತೆಯನ್ನು ಪ್ರಕಟಪಡಿಸುವ ಸಾಧನ. ಆದುದರಿಂದ ಪದವು ನಿಶ್ಚಿತಾರ್ಥವನ್ನು ಹೆಸರಿಸುವ ಒಂದು ನಾದಬಿಂದು ಅಥವಾ ನಾದಬಿಂದುಗಳ ಸಮೂಹ. ಭಾಷಾದೇವತೆಯಿಡುವ ಹೆಜ್ಜೆಯೇ ಪದ. ಅಂಥ ಹೆಜ್ಜೆಗಳ ಇಡುವಿಕೆಯನ್ನು ಮಾತ್ರ ಇಲ್ಲವೆ ಅಕ್ಷರಗಳ ಅಳಿಗೋಲಿಂದ ನಿಯಮಕ್ಕೊಳಪಡಿಸುವುದು ಛಂದಸ್ಸಿನ ಕೆಲಸ. ಈ ನಿಯಮನದ ಸಂಯಮದಿಂದ ಪದಗತಿಗೆ ನರ್ತನದ ಸೌಂದರ್ಯವುಂಟಾಗುತ್ತದೆ. ಸಂಯಮವಿಲ್ಲದ ಮಾನವಕಾರ್ಯದಲ್ಲಿ ಸೌಂದರ್ಯವೆಲ್ಲಾದರೂ ಕಾಣಲು ಸಿಕ್ಕಬಹುದೇ? ಈ ಕಾರಣದಿಂದಲೇ ಪದ್ಯಸ್ಥ ಪದಕ್ಕೆ ಗದ್ಯಸ್ಥ ಪದಕ್ಕಿಲ್ಲದ ಒಂದು ಐಂದ್ರಜಾಲಿಕ ಆಕರ್ಷಕತೆ ಇರುವುದು ಕಂಡುಬರುತ್ತದೆ.

> " ತಯಾ ಕವಿತಯಾ ಕಿಂ ವಾ ತಯಾ ವನಿತಯಾ ಚ ಕಿಂ
> ಪದವಿನ್ಯಾಸ ಮಾತ್ರೇಣ ಯಯಾ ನಾಪಹೃತಂ ಮನಃ "

ಎಂಬ ರಸಿಕೋಕ್ತಿ ಮೇಲಿನ ಮಾತಿಗೆ ಪೋಷಕ. ಕಾವ್ಯಲಕ್ಷಣ ಕಿಂಚಿತ್ತೂ ಇಲ್ಲದ ಪದ್ಯದಲ್ಲಾದರೂ ಅದೇ ಮೇರೆಗೆ ಅಕಾವ್ಯ ಗದ್ಯದಲ್ಲಿರುವುದಕ್ಕಿಂತ ಹೆಚ್ಚಿನ ನಾದಸೌಂದರ್ಯವಿರುತ್ತದೆ. ನಾದಸೌಂದರ್ಯವು ಅರ್ಥಸೌಂದರ್ಯಕ್ಕೆ ಪೋಷಕ. ಇಚ್ಛೆ, ಭಾವನೆ, ಅಭಿಪ್ರಾಯಗಳೆಲ್ಲವೂ ಅರ್ಥಜಾತಿಗೆ ಸೇರಿದವು. ಅರ್ಥದ ಸೌಂದರ್ಯವು ಅದಕ

ಪರಿಣಾಮಕತೆಯನ್ನು ಹೆಚ್ಚಿಸುವ ಸಾಧನ, ಅದರ ಶಕ್ತಿವರ್ಧಕ. ಪರಿಣಾಮಕತೆಗೆ ಕೇಳುವ ಅಥವಾ ಓದುವ ಜನದ ಭಾವನಾಪರವಶತೆಯ ವೇಗ ಹಾಗೂ ಆಳ ಅಥವಾ ದಾರ್ಢ್ಯಗಳೇ ನಿಕಷ. ಆದುದರಿಂದ ಕಾವ್ಯಲಕ್ಷಣವನ್ನು **ಸಮಾನವಾಗಿ** ಉಳ್ಳ ಛಂದೋಮಯ ವಾಣಿಯ ಪರಿಣಾಮಕತೆಯು **ಅದೇ ಬಗೆಯ** ಮುಕ್ತ ಅಥವಾ ತ್ಯಕ್ತ ಛಂದಸ್ಸಿನ ವಾಕ್ಯರಚನೆಯ ಪರಿಣಾಮಕತೆಗಿಂತ ಹೆಚ್ಚು ಎಂಬುದು ಅನುಭವಾನುಸಾರಿಯಾದ ತರ್ಕನಿರ್ಣಯ.

ಈ ದೃಷ್ಟಿಯಿಂದ ಛಂದಸ್ಸು ಕಾವ್ಯದ ಒಂದು ಮಾರ್ಗದ, ರೀತಿಯ, ಶೈಲಿಯ, ತಂತ್ರದ ಅಂಗವಾಗಬಲ್ಲುದೆಂದಾಗುತ್ತದೆ. ಜೊತೆಗೇ ಅದು ಅಕಾವ್ಯದ ಅಂಗವೂ ಆಗಬಲ್ಲುದೆಂಬುದನ್ನು ಮರೆಯುವಂತಿಲ್ಲ. ಉದಾಹರಣೆಗೆ ಅಮರಕೋಶವೆಂಬ ಅಕಾವ್ಯ ಗ್ರಂಥವಿದೆ. ಛಂದಸ್ತಂತ್ರವು ಇತರ ಕಾವ್ಯತಂತ್ರಗಳಂತೆಯೇ ಯಾಂತ್ರಿಕ. ಅದರ ಸೌಂದರ್ಯವರ್ಧಕ ಶಕ್ತಿಯು ಕಾವ್ಯಸೌಂದರ್ಯವಿದ್ದ ವಾಕ್ಯರಚನೆಯಲ್ಲಿ ಮಾತ್ರ ಕಾವ್ಯಲಕ್ಷಣದ ಉತ್ತಮಿಕೆಯ ದೃಷ್ಟಿಯಿಂದ ಸಾರ್ಥಕವಾಗುತ್ತದೆ. ರಸಸಿದ್ಧಿಯೇ ಗುರಿಯಾಗಿರುವ ಗದ್ಯಪದ್ಯಗಳಲ್ಲಿ ತಂತ್ರವೊಂದರ ರಸವರ್ಧಕ ಶಕ್ತಿಯು ಅದನ್ನು ಬಳಸುವವನ ಸಂದರ್ಭಜ್ಞತೆಯನ್ನೇ ಅವಲಂಬಿಸಿರುವುದರಿಂದ ಸ್ವತಃ ತಂತ್ರಗಳಲ್ಲಿ ಪರಸ್ಪರ ಮೌಲ್ಯದ ತಾರತಮ್ಯವಿಲ್ಲ; ಅಲ್ಪಾಂಶತಃ ಇದ್ದರೆ (ಅದೂ ಸಮಾನ ಸಂದರ್ಭಗಳಲ್ಲಿ) ಅವುಗಳ ಸಂಯಮದ ಡಿಗ್ರಿಯನ್ನವಲಂಬಿಸಿ ಹಾಗೂ ಅವುಗಳಲ್ಲಿ ಒಂದೊಂದರ ಅಂಗಗಳ ರಸೋತ್ಕರ್ಷಕ್ಕೆ ಉಚಿತವಾದ ಹೊಂದಿಕೆಯನ್ನವಲಂಬಿಸಿ.

ಅರ್ಥವು ಪತಿ, ಪದವು ಸತಿ. ರಸಾರ್ಥಕ್ಕೆ ಅನುಗುಣವಾದುದು ಪದದ ಅರ್ಥ. ಕಾವ್ಯದಲ್ಲಿ ಪದಾರ್ಥಕ್ಕೆ ಅನುಗುಣವಾದುದು ಛಂದಸ್ಸಿನ ಅರ್ಥ. ರಸ ಅಥವಾ ಸೌಂದರ್ಯಕ್ಕೆ ಅಪಕರ್ಷಕವಾಗುವಂತೆ ಬಳಸಿದ ಯಾವ ತಂತ್ರವಾದರೂ ದುಷ್ಟ, ಅನುಚಿತ; ಉತ್ಕರ್ಷವಾಗಲೆಂದು ಬಳಸಿದಾಗಲೂ ಒಂದು ತಂತ್ರವು ಮಿಕ್ಕ ಕಾವ್ಯಾಂಗಗಳೊಡನೆ ಹೊಂದಿಕೊಳ್ಳದಿದ್ದರೆ ಅಥವಾ ತನ್ನ ಅಂಗಗಳಲ್ಲೇ ಅಸಂಬದ್ಧ ಅಥವಾ ಅಪೂರ್ಣವೆನಿಸಿದ್ದರೆ ದುಷ್ಟ, ಅನುಚಿತ ಎನಿಸುತ್ತದೆ. ಆದುದರಿಂದ ಛಂದೋಮಯ ವಾಣಿಯ ಪದ ಅರ್ಥದ ವಿಶಿಷ್ಟ ಉತ್ತೇಜಕತೆಯುಳ್ಳದ್ದು ಎನ್ನುವಾಗ ಮೇಲಿನ ಉಪಾಧಿಗಳನ್ನು ನೆನೆದುಕೊಳ್ಳಬೇಕು. ಸಮುಚಿತ ಉಪಾಧಿಗಳಿಂದ ಕೂಡಿದ ಭಾಷಾಬಂಧದ ಪದ್ಯಜಾತಿಯಲ್ಲಿ ರಸೋತ್ಕರ್ಷದ **ಅರ್ಥಾತ್ ರಸಸಿದ್ಧಿಯ** ಒಂದು ಅಪರಿಹಾರ್ಯ ಅಂಗವಾದ ಛಂದಃಶಕ್ತಿ ಅದರ ಪದದಲ್ಲಿದೆ ಎನ್ನಬಹುದು.

ಪ್ರಕೃತ—* 'ಛಂದಃ ಪ್ರಕ್ರಮವಿನ್ಯಸ್ತನಿಯತಾಕ್ಷರಸಂಹತಿಃ । ಗೇಯಕಾಲಕ್ರಿಯಾಮಾನ್ಯೈರ್ವಿಹಿತಾಽವಿಹಿತಾಕ್ವಚಿತ್'–ಎಂಬ ಸೂತ್ರಾನುಸಾರವಾಗಿ ಛಂದಸ್ಸೆಂದರೆ, ಒಂದು ನಿರ್ದಿಷ್ಟವಾದ ಅಕ್ಷರಗಳ ಗುಂಪುಗಳನ್ನು ಕ್ರಮವಾಗಿ ಒಂದರ ಮುಂದೊಂದನ್ನಿಡುವುದು; ಅಥವಾ ಅಂತಹ ಗುಂಪುಗಳು ತಾಲಾನುಸಾರಿಯಾಗಿದ್ದರೂ ಅಡ್ಡಿಯಿಲ್ಲ. ಛಂದಸ್ಸಿನಲ್ಲಿ ವೃತ್ತ ಜಾತಿ ಎಂದು ಎರಡು ವಿಧ. ಇವು ಅಕ್ಷರಗಣ ಮಾತ್ರಾಗಣ ಎಂದು ಎರಡು ವಿಧದ ಗಣವಿಶೇಗಳಿಂದ ಕಟ್ಟಲ್ಪಡುತ್ತವೆ. ವೃತ್ತಗಳು ಸಾಮಾನ್ಯವಾಗಿ ತಾಲದಿಂದ ಸ್ವತಂತ್ರವಿರುತ್ತವೆ; ಜಾತಿ ಪ್ರಾಯಶಃ ಲಯಬದ್ಧವಿರುವುದೇ ಹೆಚ್ಚು. ಷಟ್ಪದ್ಯಾದಿ ಮೂಲಕನ್ನಡ ಛಂದೋಗತಿಗಳು ಹೆಚ್ಚಾಗಿ ತಾಲಾನುಸಾರಿಯಾಗಿರುತ್ತವೆ. ಇದರಿಂದ

ಕನ್ನಡಿಗರ ಮಧುರ ಹೃದಯದ ಸಾಂಗೀತಿಕ ಪ್ರವೃತ್ತಿಯು ಸ್ಪಷ್ಟವಾಗುತ್ತದೆ. ಲಕ್ಷ್ಮೀಶನು ತನ್ನ ಕಾವ್ಯವನ್ನು ಮೃದಂಗ ವೀಣಾದಿ ಹಿಮ್ಮೇಳಸಹಿತ ಹಾಡಬೇಕೆಂದು ಹೇಳಿದ್ದಾನೆ. ಕುಮಾರವ್ಯಾಸನ ಭಾರತವನ್ನಂತೂ ಗಮಕಿಗಳು ಸಂಗೀತಪದ್ಧತಿಯಿಂದ ಹಾಡಿದರೆಂದರೆ 'ವೀರೋ ರಸಃ ಕಿಮುಪಯಾತ್ಯುತ ದರ್ಪ ಏವ' ಎಂಬಂತೆ ನಾರಣಪ್ಪನ ವೀರವೈಷ್ಣವತೆಯು ಕಣ್ಣೆದುರು ನಿಂತಹಾಗೆನಿಸುತ್ತದೆ! ವಾರ್ಧಿಕ ಷಟ್ಪದಿಯು ಝಂಪೆ ತಾಳದಲ್ಲೂ ಭಾಮಿನಿಯು ತ್ರಿಪುಟದಲ್ಲೂ ಹೆಜ್ಜೆಯಿಡುವುದೆಂಬುದು ಸ್ಪಷ್ಟ. ಹೀಗೆ ಷಟ್ಪದಿ ಕಾವ್ಯಗಳು ಸಾಮಾನ್ಯವಾಗಿ 'ಗೇಯ' ಅಥವಾ ಹಾಡುಗಬ್ಬಗಳೇ ಆಗಿವೆ. ಈ ಗೇಯತ್ವ-ಸಿದ್ಧಿ ಅಥವಾ ಶ್ರುತಿ-ಸುಭಗತೆಗಾಗಿಯೇ ಏನೋ ಎಂಬಂತೆ ಕನ್ನಡ ಕವಿ ಪರಂಪರೆಯಲ್ಲಿ ದ್ವಿತೀಯಾಕ್ಷರದ ಪ್ರಾಸವು ಅವ್ಯಾಹತವಾಗಿ ಇಂದಿನವರೆಗೆ ನಡೆದು ಬಂದಿದೆ.

ಹೊಸಗನ್ನಡಯುಗದ ಚೈತ್ರದಲ್ಲಿಯೇ ಹೊಸ ಹೊಸ ಮಾದರಿಯ ಛಂದಃ ಪರಿಣಾಮಗಳು ಹೊರಟವು. ಈ ನಾವೀನ್ಯಕ್ಕೆ ಆಂಗ್ಲಕಾವ್ಯಾನುಶೀಲನವೇ ಪ್ರಚೋದಕ ವಾಯ್ತು. ಪದ, ಅರ್ಥ, ವಾಕ್ಯರಚನೆ, ಅಲಂಕಾರ ಇವುಗಳ ಮೇಲೆ ಹೇಗೋ ಹಾಗೆ ಛಂಧಸ್ಸಿನ ಮೇಲೂ ಆಂಗ್ಲಕ್ರಮವು ತನ್ನ ಪ್ರಭಾವವನ್ನು ಬೀರಿತು. ಗಂಗೆಗೆ (ಯಮುನೆಯ ಸ್ಥಾನದಲ್ಲಿ) 'ಥೇಮ್ಸ್'ಸಂಗಮವಾದಂತಾಯ್ತು. ಅದರಿಂದ ಕಾವೇರಿಯಲ್ಲಿ ನೀರೇರು ವಂತೆ ಕನ್ನಡದಲ್ಲಿ ಕಾವೇರಿತು; ಹೊಸತನ ಸಂಚಾರವಾಯ್ತು, ರುಚಿ ಬೆಳೆದಿತು, ರಗಳೆಯ ಗೋತ್ರಕ್ಕೆ ಶಾಖೋಪಶಾಖೆಗಳೊಡೆದವು. ವಾರ್ಧಿಕ ಷಟ್ಪದಿಗೆ (ಚ್ಯವನ ಪ್ರಾಶ್ಯ ದಿಂದ ಕಾಯಕಲ್ಪ ಸಿದ್ಧಿಯಾಗಿ) ಕಾಲು ಬಂದು 'ಅಷ್ಟಷಟ್ಪದಿ'ಯಾದುದೇ ಅಲ್ಲದೆ ಒಂದೊಂದಾಗಿ ಗಣ ಅಕ್ಷರ ಮಾತ್ರೆಗಳು ವ್ಯತ್ಯಸ್ತವಾಗಿ ಅನೇಕ ಷಟ್ಪದಿ-ಸ್ಮಾರಕ ಛಂದೋಮುದ್ರೆಗಳು ಛಂದಃಶಾಲೆಯಲ್ಲಿ ತಯಾರಾಗಿ ಬಂದಿವೆ. ಸಾಂಗತ್ಯ, ತ್ರಿಪದಿ ಇತ್ಯಾದಿಗಳ ಆಧಾರದ ಮೇಲೆ ನಿಂತ ಛಂದೋಗತಿಗಳನ್ನು ಬಿಟ್ಟರೆ ಇಂದಿನ ಕವಿತೆಗಳಲ್ಲಿ ಸಾಮಾನ್ಯವಾಗಿ ರಗಳೆ ಮೊದಲಾದ ಷಟ್ಪದಿಜನ್ಯ ಛಂದೋಮಾರ್ಗಗಳೇ ವಿಶೇಷವಾಗಿ ಬಳಕೆಯಲ್ಲಿವೆ. ಹೀಗೆ ಆಧುನಿಕ ಕಲಾಭವನದಲ್ಲಿ ತಯಾರಾದ ಛಂದೋವಿಧಾನಗಳನ್ನು ಇನ್ನುಮುಂದೆ ಒಂದೊಂದಾಗಿ ಪರೀಕ್ಷಿಸೋಣ.

೧. ಈ ಕೆಳಗಿನ ಪ್ರಸ್ತಾರವನ್ನು ನೋಡಿ—

'ಅಷ್ಟ ಷ | ಟ್ಪದಿ ಯಲ್ಲಿ | ಉಯ್ಯಾಲೆ | ಯಾಡುತಿದೆ'

ಈ ಸಾಲು ವಾರ್ಧಿಕದ (ಮೂರು ಮತ್ತು ಆರನೆ ಸಾಲುಗಳನ್ನು ಬಿಟ್ಟು ಉಳಿದ) ಸಾಲು ಗಳನ್ನು ಹೋಲುತ್ತದೆ. ಇಂತಹ ಎಂಟು ಮತ್ತು ಆರು ಸಾಲುಗಳ ಎರಡು ಖಂಡವುಳ್ಳ ಚತುರ್ದಶ ಪದಿಗೆ 'ಅಷ್ಟಷಟ್ಪದಿ' (Sonnet 'ಸುನೀತ') ಎಂಬ ಹೆಸರನ್ನು ಕೊಡ ಲಾಗಿದೆ. ಹೀಗೆ (ಅಷ್ಟಪದಿ + ಷಟ್ಪದಿ ರೂಪದ) ಈ ನವೀನ ಛಂದೋಜಾತಿಯು ಹುಟ್ಟಿಬಂದಿದೆ. ಗಣನಿಯಮದಲ್ಲಿ ವಾರ್ಧಿಕಕ್ಕಿಂತ ಯಾವ ಭೇದವೂ ಇಲ್ಲಿ ಕಂಡು ಬರುವುದಿಲ್ಲ. ಶ್ರೀ ಬೇಂದ್ರೆಯವರ 'ಉಯ್ಯಾಲೆ'ಯಲ್ಲಿ ಇಂತಹ ಛಂದದಿಂದ ಬದ್ಧವಾದ ಕವಿತೆಗಳು ಅನೇಕವಾಗಿ ತೂಗಾಡುತ್ತಿವೆ.

ಮೇಲಿನ ತರಹದ ಸಾಲುಗಳನ್ನು ಒಂದರ ಕೆಳಗೆ ಒಂದರಂತೆ ಸಾಲು ಸಾಲಾಗಿ ಅಸಂಖ್ಯಾತವಾಗಿ ಬರೆಯುತ್ತ ಹೋದರೆ ಅದು ಲಲಿತರಗಳೆ ಅಥವಾ ಝಂಪೆರಗಳೆಯೆನಿಸು

ತ್ತದೆ. ಅನೇಕ ಹೊಸಗನ್ನಡ ಕಾವ್ಯಗಳು ಈ ದಾರಿಯಲ್ಲಿ ನಡೆದಿವೆ. ಇದರಿಂದ ಈ ರಗಳೆಯು ನವೀನ ಛಂದೋಮಂಡಲದಲ್ಲಿ ಪ್ರಥಮವರ್ಗದ ಪ್ರಭೆಯುಳ್ಳ ಶುಕ್ರನೆಂದು ಕರೆಯಬಹುದು. ಈ ರಗಳೆಯ ಭೇದವಿಶೇಷವನ್ನು ಇಂಗ್ಲಿಷಿನ Blank Verseಗೆ ಹೋಲಿಸಿ ಸರಳರಗಳೆ ಇಲ್ಲವೆ ಮುಕ್ತಛಂದ ಎಂದು ಹೇಳುವುದುಂಟು. ಆದರೆ ಇದರಲ್ಲಿ ಬರೆಯಲ್ಪಡುವ ಇತ್ತೀಚಿನ ಕೆಲವು ಕವನಗಳು ಅಕ್ಷರಶಃ 'ಮುಕ್ತಛಂದ' ಅಂದರೆ ಯದ್ವಾತದ್ವಾ ಆಗಿ ಸ್ವರೂಪತಾಳಿವೆ! ನಾಗರಿಕ, ಚಿತ್ರಾಂಗದೆ ಮೊದಲಾದ ಕಾವ್ಯಗಳು ಸರಳರಗಳೆಯಲ್ಲಿ ನಡೆವಂಥವುಗಳ ಉತ್ತಮ ಉದಾಹರಣೆಗಳು.

೨. ಎರಡನೆಯ ಛಂದೋವಿವರ್ತನೆಂದರೆ—

'ಇರುಳು | ಬಂದಿತು | ಇರುಳು | ಹೋಯಿತು
ಮನದ | ಇರುಳೀ | ಕಳೆಯು | ದು

ಇದರ ಪ್ರಥಮ ಪಾದವು ಭಾಮಿನಿಯ (ಮೂರು ಮತ್ತು ಆರನೆಯ ಸಾಲುಗಳನ್ನುಳಿದು) ಸಾಲುಗಳಂತಿದೆ. ಎರಡನೆಯ ಸಾಲಿನಲ್ಲಿ ಮಾತ್ರ ಎರಡು ಮಾತ್ರೆಗಳು ಕಡಮೆಯಾಗು ತ್ತವೆ. ಮೂರು ಮತ್ತು ನಾಲ್ಕು ಮಾತ್ರೆಯ ಗಣಗಳು ಭಾಮಿನಿಯ ಪ್ರಕ್ರಮದಲ್ಲಿಯೇ ಇಡಲ್ಪಟ್ಟಿವೆ. ಇದಕ್ಕೆ ಇದೇ ಅಳತೆಯ ಉತ್ತರಾರ್ಧ ಕೂಡಿದರೆ ಒಂದು ನುಡಿ (Stanza, ಸೊಲ್ಲು) ಆಗುತ್ತದೆ.

ಮೇಲಿನ ಉದಾಹರಣೆಯ ಎರಡನೆಯ ಸಾಲಿನಲ್ಲಿ ಕಡೆಯ ಮೂರು ಮಾತ್ರೆಗಳನ್ನು ತೆಗೆದರೆ ಮತ್ತೊಂದು ಮಾದರಿ ತಯಾರಾಗುತ್ತದೆ—

* ತೆಪ್ಪ | ಗಿದ್ದರೆ | ಸೊಳ್ಳೆ | ಯೂ ಸಹ
ತಪ್ಪು | ಕಂಡೀ | ತು
ಕಪ್ಪು | ರವಿಶಶಿ | ಗಳನು | ಕೂಡಾ
ಅಪ್ಪಿ | ಕೊಂಡೀ | ತು |

ಅಥವಾ 'ಮನದ ಇರುಳೀ ಕಳೆಯುದು' ಎಂಬ ಪ್ರಮಾಣದ ನಾಲ್ಕು ಪಾದಗಳನ್ನು ಕೂಡಿಸಿದರೆ ಬೇರೆ ಒಂದು ಚತುಷ್ಪದಿಯಾಗುತ್ತದೆ; ನಾಲ್ಕಲ್ಲದೆ ಅಸಂಖ್ಯಾತ ಪಾದ ಗಳಾದರೆ ಒಂದು ತ್ರಿವುಟ ರಗಳೆಯೆಂದಾಗಬಹುದು.

ಸಂಸ್ಕೃತದ ಮಲ್ಲಿಕಾಮಾಲೆ ಅಥವಾ ತರಳವೃತ್ತಗಳ ಅಳತೆಯಲ್ಲಿ ಮಾತ್ರಾಗಣ ಹಾಕಿ ಜಾತ್ಯಂತರಗೊಳಿಸಿದರೆ ಭಾಮಿನಿಯ ಗೋತ್ರಕ್ಕೆ ಸೇರುವ ಚೌಪದಿಯೊಂದು ಸಿದ್ಧ ವಾಗುತ್ತದೆ—

* ಛಂದವನು ಬ | ಲ್ಲವನ ಮಾತಿನ | ಬಂಧವನು ನೀ | ಬಲ್ಲೆಯಾ
ಕಂದನಪ್ಪಿನ | ತಾಯ ನಡುವಿನ | ಚಂದವನು ನೀ | ಬಲ್ಲೆಯಾ
ಬಂಧವೊಬ್ಬಗೆ ಚಂದ ಚಂದವೆ ಬಂಧ ಬೇರೊಬ್ಬಾಕೆಗೆ
ಒಂದರೊಳಗೊಂದಾಗಿ ಬಾಳುವ ಬಂಧ ಚಂದ ಜಗತ್ತಿಗೆ |

'ಚಂದ್ರಚುಂಬಿತಯಾಮಿನೀ' ಇತ್ಯಾದಿಗಳು ಇದರ ಪ್ರಭೇದಗಳು. ಪಾದಗಳಲ್ಲಿ ಒಂದು ಎರಡಾಗಿ ಬರೆಯಲ್ಪಡಬಹುದು, ಎರಡು ಒಂದಾಗಿ ಬರೆಯಲ್ಪಡಬಹುದು. ಅದರಿಂದ ಗಣಕ್ರಮವು ವ್ಯತ್ಯಾಸಹೊಂದುವುದಿಲ್ಲ. ಹೀಗೆ ಎರಡನ್ನು ನಾಲ್ಕಾಗಿಯೂ,

ನಾಲ್ಕನ್ನು ಎರಡಾಗಿಯೂ, ಆರನ್ನು ನಾಲ್ಕಾಗಿಯೂ ಅಥವಾ ಎರಡು ಮೂರನ್ನು ಒಂದಾಗಿಯೂ ಯಥೇಚ್ಛವಾಗಿ ಇಂದು ಬರೆಯುತ್ತಾರೆ.

೩. ಇನ್ನು 'ಕುಸುಮ'ದ ಪರಿಮಳವನ್ನು ಪರಿಕಿಸುವ: ಕುಸುಮ ಷಟ್ಪದಿಯ ಮೊದಲೆರಡು ಪಾದಗಳನ್ನು ಕೂಡಿಸಿದರೆ ವಾರ್ಧಿಕದ ಒಂದನೆಯ ಸಾಲಾಗುತ್ತದೆ. ಮೂರನೆಯ ನಾಲಿನಲ್ಲಿ ಆ ಎರಡು ಸಾಲುಗಳ ಮೊತ್ತಕ್ಕಿಂತ ಕಡೆಯಲ್ಲಿ ಮೂರು ಮಾತ್ರೆಗಳು ಕಡಮೆಯಿದ್ದರಾಯಿತು—

* ನಾನಹುದು | ನೀನಹುದು
ನನ್ನಲ್ಲಿ | ನೀನಿಹುದು
ಹೂವಿನಲಿ | ಜೇನಿರುವ | ಹಾಗೆ ದೇ | ವx

ಇದರ ಮೊದಲನೆಯ ಎರಡು ಸಾಲುಗಳನ್ನು ಒಂದು ಪಾದವನ್ನಾಗಿ ಮಾಡಿ ಮೂರನೆಯದನ್ನು ಎರಡನೆಯ ಸಾಲಾಗಿ ಬರೆವುದು ಇಂದಿನ ರೂಢಿ. ಈ ಎರಡನೆಯ ಸಾಲಿನಲ್ಲಿ ಐದು ಮಾತ್ರೆಗಳನ್ನು ಅಂತ್ಯದಲ್ಲಿ ಲೋಪಮಾಡಿದರೆ ಮುಂದೆ ಕೊಟ್ಟ ಹಾಗೆ ರೂಪಭೇದ ಉಂಟಾಗುತ್ತದೆ—

'ವನಸುಮದೊ | ಲೆನ್ನಜೀ | ವನವು ವಿಕ | ಸಿಸುವಂತೆ
ಮನವನನು | ಗೊಳಿಸು ಗುರು | ವೇ'

ಇದು ಒಂದು ಸೊಲ್ಲಿನ ಪೂರ್ವಾರ್ಧ. ಹಾಗಲ್ಲದೆ ಕುಸುಮದ ಮೂರನೆಯ ಸಾಲಿಗೆ ಅಂತ್ಯದಲ್ಲಿ ಎರಡು ಮಾತ್ರೆಗಳು ಆಗಮಿಸಿದರೆ ಅದೊಂದು ಹೊಸ ವಿಧಾನವೆನಿಸುತ್ತದೆ.

* ಹೆಂಗಸಿನ | ಹಾಗಿರುವ | ಗಂಡಸೀ | ಬಾಳಿನಲಿ
ಭಂಗಿಸಲು | ಬಾರದ ಸ | ಮಸ್ಯೆಯಾ | ಗಿಹನು |

ಇದು ಅರ್ಧನುಡಿ; ಇದರ ಮುಂದೆ ಇಂಥದಿನ್ನೊಂದರ್ಧ ಸೇರಿದರೆ ಪೂರ್ಣವಾಗುತ್ತದೆ. ಮುಂದೆ ಸಾಗಿ ಈ ಪಾದಯುಗ್ಮಗಳನ್ನು ಒಂದೇ ಪಾದವೆಂದು ಗಣಿಸಿ ಯಥೇಷ್ಟವಾಗಿ ಬರೆಯುತ್ತ ಹೋದರೆ ಕುಸುಮರಗಳೆಯಾಗಿ ಹೋದೀತು. 'ಉಯ್ಯಾಲೆ'ಯಲ್ಲಿರುವ ಸೀಸಪದ್ಯಗಳು ಇದರದೇ ಒಂದು ಪ್ರಕಾರವೆನಿಸುವುವು.

೪. ಅನಂತರ 'ಭೋಗ'ದ ಓಘದಿಂದ ಎಂಥೆಂಥ ಮುದ್ರೆಗಳು ಮುದ್ರಿತವಾಗಿ ಹೊರಬಿದ್ದಿವೆಯೆಂದರೆ: ಭೋಗಷಟ್ಪದಿಯ ಒಂದನೆಯ ಸಾಲನ್ನು ಒಂದರ ಕೆಳಗೊಂದನ್ನಿಟ್ಟು ಸೋಪಾನವನ್ನು ಕಟ್ಟುತ್ತ ನಡೆದರೆ ಉತ್ಸಾಹರಗಳೆಯೆಂಬ ಸರೋವರವನ್ನು ತಲುಪುತ್ತೇವೆ.

* ನಾವೆ | ನೀವು | ನೀವೆ | ನಾವು
ಮೊದಲು ; ಆದರೀಗ ನೋಡೆ—
ನಾವು ನಾವು, ನೀವು ನೀವು ;
ನಮಗೆ ನಿಮಗೆ ನಡುವೆ ಗೋಡೆ !

---

x ಕೆಲವು ರಗಳೆಗಳನ್ನುಳಿದರೆ ಷಟ್ಪದಿಗಳಲ್ಲಿ ಮೂರು ಮತ್ತು ಆರನೇ ಪಾದಗಳ ಅಂತ್ಯಾಕ್ಷರವನ್ನೂ ಚೌಪದಿಯಲ್ಲಿ ಎರಡು ಮತ್ತು ನಾಲ್ಕನೆಯ ಪಾದಗಳ ಕಡೆಯ ವರ್ಣಗಳನ್ನೂ ಗುರುವೆಂದು ತಿಳಿಯತಕ್ಕದ್ದು.

ಹೀಗೇ ಸರವಾಲೆಯಾಗಿ ಹೋಗುತ್ತದೆ. ಮೇಲಿನೆರಡು ಸಾಲುಗಳನ್ನೊಂದಾಗಿಸಿ ಒಂದಾದರ ಮೇಲೊಂದರಂತೆ ಹೆಣೆದು ಅದೊಂದು ಬೇರೆ ರೂಪವಾಗಿ ಕಾಣುವ ಛಂದೋಮಾಲೆಯನ್ನು ತಯಾರಿಸುವುದೂ ಉಂಟು. ಮತ್ತೊಂದು ರೀತಿಯು 'ಉತ್ಸಾಹ'ದಲ್ಲಿ ಉದಾಹೃತ ಪಾದದಲ್ಲಿ ಅಂತ್ಯದಲ್ಲಿ ಏಕಮಾತ್ರಾಲೋಪಮಾಡುತ್ತಾರೆ:

* ದಯೆಯ | ಮಾತ | ನಾಡು | ವೆ
ದಯೆಯ | ತೋರ | ದೋಡು | ವೆ;
ಹಯನ | ವಿರದ | ಹಸುವೆ | ಛೀ
ನಡೆಯ | ದಿರುವ | ನಾಣ್ಯ | ಧೂ |

ಇದೂ ಅಲ್ಲದೆ ಭೋಗದ ಮೂರು ಅಥವಾ ಆರನೆಯ ಪಾದದ ಅಂತ್ಯದಲ್ಲಿರುವ ಗುರುವಲ್ಲದೆ ಉಪಾಂತ್ಯದ ಅಕ್ಷರಕ್ಕೆ ಗುರುತ್ವ ಕೊಟ್ಟು ಬರೆವುದೂ ಇಂದಿನೊಂದು ಸೊಗಸು:

* ದಾರಿಯಲ್ಲಿ ಬಿದ್ದ ಹೂವನೆತ್ತಿಕೊಂಡೆ,
ಎತ್ತಿಕೊಂಡು ಎದೆಗೆ ಅದನು ಒತ್ತಿಕೊಂಡೆ;
ಒತ್ತಿಕೊಂಡು ಅಲ್ಲೆ ಕಣ್ಣು ಮುಚ್ಚಿಕೊಂಡೆ,
ಮುಚ್ಚಿಕೊಂಡು ಎದೆಗೆ ಚೂರಿ ಚುಚ್ಚಿಕೊಂಡೆ |

ಅಥವಾ ಉಕ್ತಮುದ್ರೆಯ ಸಾಲಿನಲ್ಲಿ ಒಂದು ಗಣವನ್ನು ಲೋಪಿಸಿದರೆ—

* ಶರದ ಚಂದ್ರನಂತೆ ಅವನು ನಕ್ಕ,
ಹಿಗ್ಗಿಹೋದೆ ಹಾರಿತೆನ್ನ ಪಕ್ಕ |
ಒರೆದ ಮಾತ ಕೇಳಿದೊಡನೆ ಅಕ್ಕ,
ಕರಗಿಹೋದೆನೇರಿಬರಲು ದುಕ್ಕ |

ಅದೂ ಅಲ್ಲದೆ ಮತ್ತೆ—

'ನನ್ನ ನಾನು ಮರೆಯುವಂತೆ
ಮದ್ಯವನ್ನು ಕುಡಿದೆನು |
ತನ್ನ ತಾನು ಅರಿಯುವಂಥ
ವಿದ್ಯೆಯನ್ನು ಹಿಡಿದೆನು |'

ಇದರ ಒಂದು ಮತ್ತು ಮೂರನೆಯ ಸಾಲುಗಳು ಭೋಗದ ಪ್ರಥಮ ಪಂಕ್ತಿಯನ್ನು ಹೋಲುತ್ತವೆ. ಎರಡು ಮತ್ತು ನಾಲ್ಕನೆಯ ಸಾಲುಗಳಲ್ಲಿ ಮೊದಲ ಸಾಲಿಗಿಂತ ಒಂದು ಮಾತ್ರೆ ಮಾತ್ರಕಡಮೆ. ಮತ್ತೂ ಒಂದು ಮಾತ್ರೆ ಕಡೆಯಲ್ಲಿ ಕಡಮೆಮಾಡಿ ಬರೆವುದೂ ಉಂಟು. ಅದೊಂದು ಹೊಸ ಅಚ್ಚು.

ಹಿಂದಣ ಕವಿಗಳು 'ಕಂದ'ದ ಎರಡು ನಾಲ್ಕನೆ ಪಾದಗಳ ಆದಿಯಲ್ಲಿ I 'ಜಗಣ'ದಂತೆ ಅಕ್ಷರವಿನ್ಯಾಸ ತಂದು ಒಂದು ಅತಿಶಯವನ್ನೊಡರಿಸಿರುವಂತೆ ಈಗಣ ಕವಿಗಳು ಭೋಗಜನ್ಯ (ಚತುಷ್ಪದಿ) ಛಂದೋಮುದ್ರೆಯ ಪಾದಾದಿಯಲ್ಲಿ ಹಾಗೆ ಪ್ರಯೋಗಿಸಿ ಒಂದು ವಿಧದ ನೃತ್ಯಚಮತ್ಕಾರವನ್ನು ತೋರಿಸಿದ್ದಾರೆ—

I ಭೋಗದಲ್ಲಿ ಮೂರು ಮಾತ್ರೆಗೆ ಒಂದು ಗಣ; ಮೂರಕ್ಷರಕ್ಕಲ್ಲ. ಆದರೆ 'ತೊರೆದು + ಅದಿನ' ಎಂದು ತೋರಿಸುವುದು ತಪ್ಪಾಗುವುದರಿಂದ 'ತೊರೆದಾ' ಇತ್ಯಾದಿಗಳನ್ನು ಅಕ್ಷರಗಣಕ್ಕೆ ಹೋಲಿಸಿ ಹೇಳಲಾಗಿದೆ.

* **ಕನಿಷ್ಠಿ**ಕದಿ ನಿಂತ ಕವಿಗೆ
**ಅನಾಮಿ**ಕನದೇನು ?
**ವಿನಾಯ**ಕಗೆ ನೋಡಿ ನಲಿವ
**ವನೇಚ**ರನದೇನು ?

ಭೋಗದಲ್ಲಿ ಗುರ್ವಂತ ಗಣವು ನಿಷೇಧಿಸಲ್ಪಟ್ಟಿದೆ. ಆದರೆ ಇಲ್ಲಿ ಅದು ಒಂದು ಹೊಸ ಬಗೆಯ ಸೊಬಗನ್ನೇ ತಂದಿದೆ. ಅಥವಾ ಹಾಗೇ ನಡೆದರೆ ಇಲ್ಲಿಗೂ ಬಂದು ಮುಟ್ಟುತ್ತೇವೆ—

' **ತೊರೆದಾ** ದಿನ ನಂದನವನ
**ಭೂಬಂಧ**ನ ಪಡೆಯಿತು '

ಇಲ್ಲಿ ವೃತ್ತದ I ಸ-ತ ಗಣಗಳಂತೆ ಪಾದಾದಿಯಲ್ಲಿ ಅಕ್ಷರವಿನ್ಯಾಸವಿದೆ. ಯ ಗಣದಂತೆಯೂ ಇರಬಹುದು —

* **ಅಗೋ** ಅಲ್ಲಿ ಮೂಡಲಲ್ಲಿ
**ನಭೋರಾ**ಜ ಮೂಡಿದ ;
**ಖಗಾಲಾ**ಪದಿಂದ ಹಿಗ್ಗಿ
ಶುಭೇಕ್ಷಣದಿ ನೋಡಿದ !

ಈ ವಿಧದ ಅಕ್ಷರ ವಿನ್ಯಾಸವು ಭೋಗಷಟ್ಪದಿಯಲ್ಲಿ ಎಲ್ಲೂ ಬರುವುದಿಲ್ಲ. ಇಂತಹ ರಚನೆಯು ಕೇವಲ ಇತ್ತೀಚಿನದು. ಆದರೆ ಈ ವಿಧದ ರಚನೆಗಳೆಲ್ಲ ಭೋಗದಂತೆ ರೂಪಕ ತಾಲಾನುಸಾರಿಗಳಾಗಿವೆ ಎಂಬುದೇ ಇವುಗಳ ಒಳಸೂತ್ರ ಮತ್ತು

' ಭೂ ಬಂಧನ ಪಡೆಯಿತು '
' ಪ್ರೀತಿಪಾತ್ರವುಳಿದಿತು '
' ಇದರ ಚಂದ ಹೊಸತಿದು '
' ಇದರ ಕೂಟ ತಿಳಿಯದು '

ಹೀಗೆ ಚೌಪದಿ ಅಥವಾ,

' ನನ್ನ ನಾನು ಮರೆಯುವಂತೆ ಮದ್ಯವನ್ನು ಕುಡಿದೆನು
ತನ್ನ ತಾನು ಅರಿಯುವಂಥ ವಿದ್ಯೆಯನ್ನು ಹಿಡಿದೆನು,

ಎಂಬ ದ್ವಿಪದಿ ಇಲ್ಲವೆ ಅಸಂಖ್ಯಾತ ಪಂಕ್ತಿಯಿಂದ ರೂಪಕ ರಗಳೆ ಆಗಬಹುದು ; ಅಲ್ಲದೆ ಸಂಸ್ಕೃತದ ಅಕ್ಷರಗಣಬದ್ಧವಾದ ಮತ್ತಮಯೂರವೆಂಬ ವೃತ್ತದಳತೆಯಲ್ಲಿ ಮಾತ್ರಾಗಣ ವಿನ್ಯಾಸಮಾಡಿ ಮೇಲಿನ ಜಾತಿಗೆ ಸೇರುವ ಹೊಸಮುದ್ರೆಯೂ ಇಂದು ರೂಪುಗೊಂಡಿದೆ—

' ದಾನವಹೃತ | ಮೇದಿನಿಯಂ | ದಂಷ್ಟ್ರಾಗ್ರದೊ | ಳಿರಿಸಿ '
ಇಂತಹ ನಾಲ್ಕು ಸಾಲುಗಳಿಗೆ ಒಂದು ನುಡಿ.

೫. ಇನ್ನು ' ಶರ'ದ ವೇಗವನ್ನು ನೋಡುವಾ. ಶರಷಟ್ಪದಿಯ ಮೂರು ಸಾಲುಗಳನ್ನೂ ಒಂದಾಗಿಸಿ ಅಂತ್ಯದ ನಾಲ್ಕು ಮಾತ್ರೆಗಳನ್ನು ಕಳೆದು ಕಡೆಯ ವರ್ಣಕ್ಕೆ ಗುರುತ್ವ ಕೊಟ್ಟರೆ ' **ಅಕ್ಕರಿಕೆ** ' ಎಂಬ ಮಾತ್ರಾವೃತ್ತವಾಗುತ್ತದೆ :

'ಈಶನ | ಕರುಣೆಯ | ನಾಶಿಸು | ವಿನಯದಿ | ದಾಸನ | ಹಾಗೆಯೆ | ನೀ'

ಅದರ ಒಂದು ನುಡಿಗೆ ಇಂತಹ ನಾಲ್ಕು ಸಾಲುಗಳು. ಇದರ ಕೊನೆಗೆ ಮತ್ತೊಂದು ಗುರುವನ್ನು ಸೇರಿಸಿದರೆ ಮತ್ತೊಂದು ವಿಧವಾಗುತ್ತದೆ—

* ಬಹುದಾ|ದುದನಹು | ದೆನ್ನುವ | ಮಾನವ | ರಿದ್ದರೆ|ತೊಂದರೆ | ಯಿಲ್ಲ
ಅಹುದಾ|ದುದನ | ಲ್ಲೆಂಬ ವಿ|ದಗ್ಧನ | ಕಂಡರೆ ಬೀಸಿರಿ | ಕಲ್ಲ |
ಮತ್ತಿತ್ತ ನೋಡಿ—

' ಮೋರೆಯು | ಸಾವನು
ಅಣಕಿಸು | ತಿಹುದು
ಕೊರಳಿಗೆ | ಹತ್ತಿದೆ
ಸಾಲದ | ಶೂಲ '

ಇಲ್ಲಿ ಶರಷಟ್ಪದಿಯ ಮೊದಲ ಸಾಲಂತಹ ನಾಲ್ಕು ಸಾಲುಗಳಿವೆ. ಇಂತಹ ಸಾಲುಗಳ 'ಸಾಲಾವಳಿ' ಯಿದ್ದ ಛಂದಸ್ಸಿಗೆ ಶರರಗಳೆಯೆನ್ನಬಹುದು.

' ನಾನು | ಬ್ರಹ್ಮನು
ಹೌದಂ | ತೆ
ನಾ ನರ | ನೆಂದೂ
ಅಲ್ಲಂ | ತೆ '

ಎಂಬುದು ಮೇಲಿನದರ ಪ್ರಭೇದ. ಇಂತಹ ರಗಳೆಯಲ್ಲಿ ಕೆಳಗೆ ಕಾಣಿಸಿರುವಂತೆ ಶರಷಟ್ಪದಿಗೆ ನಿಷಿದ್ಧವಾದ ಆದರೆ ಚಮತ್ಕಾರಾವಹವಾದ ನವೀನ ರೀತಿಯಲ್ಲಿ ಅಕ್ಷರ ವಿನ್ಯಾಸ ಮಾಡುತ್ತಾರೆ—

' **ಭೂಮಿತಾ**ಯಿಯಾ
ಚೊಚ್ಚಿಲ ಮಗನನು
ಕಣ್ತೆರೆದೊಮ್ಮೆ
ಕಂಡಿಹಿರೇನು ? '

ಇದು ಉಪಲಕ್ಷಣ ಮಾತ್ರ ; ಇಂತಹ ಅನೇಕ ಮಾದರಿಗಳು ವಿಧವಿಧವಾದ ವರ್ಣಕ್ರಮದಿಂದ ಇಂದು ಸೃಷ್ಟವಾಗಿವೆ.

೬. ಬಳಿಕ ಯಾವ ರೀತಿಯಲ್ಲಿ ' ಪರಿವರ್ಧಿನಿಯು ' ವರ್ಧಿಸುತ್ತಿದೆಯೆಂತೆನೆ—

' ತುಂಗಾತೀರದ | ಬಲಗಡೆಯಲ್ಲಿ
ಹಿಂದಲ್ಲಿದ್ದುದು | ಬೊಮ್ಮನಹಳ್ಳಿ
' ಅಲ್ಲೇನಿಲಿಗಳ | ಕಾಟವೆ ಕಾಟ
ಅಲ್ಲಿನ ಜನಗಳ|ಗತಿಗೋಳಾಟ '

ಎಂಬುದು ಪರಿವರ್ಧಿನಿಯ ಮೊದಲ ಪಾದದ ನಾಲ್ಕು ಆವೃತ್ತಿಗಳಿಂದ ತಯಾರಾಗಿದೆ. ಈ ಮುದ್ರೆಯೂ ಕೂಡ ಇಂದು ಬಹಳ ಬಳಕೆಯಲ್ಲಿದೆ. ಈ ರಗಳೆಗೆ ಮಂದಾನಿಲರಗಳೆಯೆಂದು ಕರೆವ ರೂಢಿಯಿದೆ. ಅನಂತರ ಇದೂ ಒಂದು ಅದರ ಪ್ರಭೇದ—

* ಜ್ಯೋತಿ | ರ್ಮಯವೀ | ಆತ್ಮವಿ | ದೆಂದೂ
ಮಾತಿಗೆ | ಸಿಗದ | ಣ್ಣ ;
ವಾತಾ | ವರಣದ | ದಾಸನೆ | ಧೈರ್ಯದಿ
ತೆರೆ ನಿ | ನ್ನೊಳಗ | ಣ್ಣ !

ಅಲ್ಲದೆ ಇದರಲ್ಲಿ ವಿಚಿತ್ರ ವರ್ಣವಿನ್ಯಾಸ ಬಂದರೆ—

* **ಪ್ರಗಲ್ಭ**ಮತಿಯಲ್ಲದ ಕವಿಹತಕನ
**ಪ್ರಜಲ್ಪ**ನೆಗೆ ಜನ ಮೆಚ್ಚೀತೆ?
**ಶೃಗಾಲ**ಗರ್ಜನೆಯಾಲಿಸಿ ಜಗದಲಿ
**ವಿದಗ್ಧ**ಕೇಸರಿ ಬೆಚ್ಚೀತೆ?

ಎಂಬ ವಿಧವು ಸಿದ್ಧವಾಗುತ್ತದೆ. ಇದಲ್ಲದೆ—

* 'ಪರಿವರ್ಧಿನಿಯಲಿ | ಮೊದಲಿನ ಪಾದಕೆ | ಶರದ ತೃತೀಯವ | **ಜೋಡಿಸಲು** ಪರಿವುದಪರಿಮಿತ ವೀಚಿಯನೆಬ್ಬಿಸಿ | ಪರಿವೃದ್ಧ ದ ರಗ | ಳೆಯ ಹೊನಲು' ಎಂಬತೆ **ಪರಿವೃದ್ಧ** ರಗಳೆಯ ಪರಿಯು ಹೊರಡುತ್ತದೆ. ಮತ್ತು ಕೆಳಗಿನ ಮಟ್ಟರಗಳೆಯೂ ಇದರ (ಪರಿವರ್ಧಿನಿಯ) ಶಾಖೆಯೆನ್ನಬಹುದು :

'**ನಂದನಂ**ಗಳೊಳ್ | ಸುಳಿವಬಿ | ರಯಿಯಿಂ
**ಕಂಪು**ಕಣ್ಮಲೆಯ | ಪೂತ ಸು | ರಯಿಯಿಂ
**ಸುತ್ತಲುಂ** ಪರಿವ | ಜರಿವೊನಲ್ಗಳಿಂ
**ಎತ್ತಲುಂ** ನಲಿವ | ಪೊಸನವಿಲ್ಗಳಿಂ' ಇತ್ಯಾದಿ.

ಇಲ್ಲಿಯೂ ವಿಚಿತ್ರವರ್ಣವಿನ್ಯಾಸವೇ ಮುಖ್ಯವಾದದ್ದು.

ಮುಂದೆ ಶ್ರೀ ಬೇಂದ್ರೆಯವರ ಕನ್ನಡ ಮೇಘದೂತದ ಛಂದಸ್ಸು ಪರಿವೃದ್ಧ ರಗಳೆಯಲ್ಲಿ ವಿಶೇಷ ವರ್ಣವಿನ್ಯಾಸದಿಂದ ಹುಟ್ಟುತ್ತದೆ—
'**ನಮೋ** ಎಂಬೆ ಕವಿ | ಗುರುವೆ ತಣಿಸಿತೋ | ಅಮರ**ದೂತ ಮೇಘ** ನಿನ್ನ ಇನಿಯಳಂ | **ತೆಯೇ** ನನ್ನನೂ | ದಿವ್ಯ **ಕಾವ್ಯದೋಘ**'. ಆದರೆ ಅದಕ್ಕಿಂತ ಇದರ ಸಾಲಿನ ಕಡೆಯಲ್ಲಿ ಮೂರು ಮಾತ್ರೆಗಳು ಕಡಿಮೆ. ಇದನ್ನು ಮಂದಾಕ್ರಾಂತರಗಳೆಗೆ ಸರಿಯೆನ್ನುವುದು ಸಹಜವಾಗಿದೆ. ಇದು ಸಂಸ್ಕೃತದ ಮಂದಾಕ್ರಾಂತವೃತ್ತಕ್ಕೆ ಮಂದ ಮಂದ ಗತಿಯಲ್ಲಿ ಸಾಧಾರಣ ಹೋಲುತ್ತದೆ. ಕೊನೆಯದಾಗಿ ಪೊನ್ನನ ಶಾಂತಿಪುರಾಣದಲ್ಲಿ ಕಾಣುವ **ತ್ವರಿತ** ರಗಳೆಯೊಂದಿದೆ. ಇದು ಪ್ರಾಚೀನವಿದ್ದರೂ ಇದರಲ್ಲಿ ಎಂದೂ ಅಳಿಯದ ನಾವೀನ್ಯವಿದೆ. ಇಲ್ಲಿಯೂ ವಿಚಿತ್ರವರ್ಣವಿನ್ಯಾಸವೇ ಪ್ರಧಾನ; ಈ ತ್ವರಿತ ರಗಳೆಯ ಉದಾಹರಣೆ ಹೀಗೆ—

* ವರ | ವನರುಹಸಂಭವ | ನೆದೆಯ **ಕಾವೆ,** ಜಪ
ಸರಕರ **ನಿರಸ್ತ** | ಮಲಿನ**ಭಾವೆ** ತಪ
**ಕೊಲಿವತಾಯೆ** ಕರು | **ಣಾಂತರಂಗೆ** ಶಮ
ದಮುಗಳ ಸೂಸುವ | **ಕಣ್ಣಿನಾಕೆ** ನಮ
ಗಿರಲಿ **ನಿನ್ನ ಕೃಪೆ** | ಸರ್ವ**ಶುಕ್ಲೆ** . . . . . . ಇತ್ಯಾದಿ.

ಇದರ ಏರಿಳಿತವು ಶರಾವತಿಯ ನುಗ್ಗಿನಂತೆ ಮನೋಹರವಿರುತ್ತದೆ. ಇದರ ಗತಿಯು ವೇಗವಾಗಿ ಓಡುವ ಅರಬ್ಬಿ ರಾಕಣದ ಗತಿಯಂತಿದೆ.

ಇನ್ನು ಹಾಡುಗಳು. ಕೇವಲ ಹಾಡುಗಬ್ಬಗಳೆನಿಸುವ ಸಾಂಗತ್ಯಾದಿಗಳತ್ತ ಕಣ್ಣು ಹಾಕಿದರೆ ನಮಗೆ ಕಾಣುವುದು ಹ್ರಸ್ವ, ದೀರ್ಘ, ಪ್ಲುತ ಇವುಗಳನ್ನು ತಾಲಾನುಸಾರ ಒಂದರಂತೆ ಇನ್ನೊಂದನ್ನು ಉಚ್ಚರಿಸುವ ಪ್ರಸಂಗ. ಇದು ಹಾಡುಗಳ ಸಾಮಾನ್ಯ ರೀತಿ. ಸಾಂಗತ್ಯವನ್ನು ಓದುವಾಗ ಯಾವ ಹ್ರಸ್ವವನ್ನು ಎಳೆಯಬೇಕು ಯಾವ ದೀರ್ಘವನ್ನು ತೇಲಿಸಿ ಓದಬೇಕು ಎಂಬುದು ತಾಳಜ್ಞನಾದ ಮತ್ತು ಅರ್ಥಜ್ಞನಾದ ರಸಿಕನಿಗೆ ಸೇರಿದುದಾಗಿದೆ. ಅರ್ಥ ಕೆಡಕೂಡದು ; ತಾಳತಪ್ಪಬಾರದು. ಉದಾ—

‘ ಈಶನ | ಕರುಣೆಯ | ನಾಶಿಸು | ವಿನಯದಿ
ದಾಸನ | ಹಾಗೆಯೆ | ಮನವೆ
ಕ್ಲೇಶದ | ವಿಧವಿಧ | ಪಾಶವ ಹರಿದು ವಿ
ಲಾಸದಿ ಸತ್ಯವ | ತಿಳಿವೆ ’

ಇಲ್ಲಿ ಹ್ರಸ್ವವನ್ನು ದೀರ್ಘೀಕರಿಸುವ ಪ್ರಸಂಗ ಮಾತ್ರವಿದೆ. ಇದರ ಎರಡು ನಾಲ್ಕನೆ ಸಾಲುಗಳ ಅಂತ್ಯದಲ್ಲಿ ಮತ್ತೆರಡು ಮಾತ್ರೆಗಳನ್ನು ಸೇರಿಸಿದರೆ—

‘ ಮನೆ ನಡುಗಿ | ಮನ ನಡುಗಿ | ಏ ಹುಡುಗ ಎಲೆ ಹುಡುಗಿ
ಎನ್ನುವ | ಸಲುಗೆಯ ಬೆಸುಗೆ ಬ | ರೆ
ಮೈತಾಗಿ ಮನೆಬಾಗಿ ಒಳಿತಾಗಿ | ಇಂಬಾಗಿ
ನಾವಾಗಿ | ಈ ಮಾಗಿ | ಗೊಳಗಾಗಿ | ರೆ ’

ಎಂಬ ರೂಪವು ಹೊರಪಡುವುದು.

ತ್ರಿಪದಿಯನ್ನಂತೂ ಹಳ್ಳಿಗಳಲ್ಲಿ ಚೌಪದಿ ಮಾಡಿ ಹಾಡುವುದು ಸುಪ್ರಸಿದ್ಧವೇ ಇದೆ.

‘ ಕೂಲಿಯ | ಗಂಡಿಗೂ | ಕುಂಟು ಪಾ | ರ್ಪತ್ಯವು
ಹೇಳಿದ | ಮಾತ | ನಡಿಸನು | ಒಡೆಯಂಗೆ
ಆಳಲ್ಲ | ತಾನೆ | ಅರಸೆಂಬ ’

ಅಥವಾ—

* ಎರಡು ಸಾ | ಲಿನ ನುಡಿಯ | ಮೇಲಿನೆರ | ಡರ ಹಾಗೆ
ತೆರೆಯಾಗಿ | ಹಾಡಿ | ತೆರೆದೇನು | ಕರೇದೇನು ನಾನೀಗ

ಇಂಥದನ್ನು ತ್ವರಿತಗತಿಯಿಂದ ಹಾಡುತ್ತಾರೆ.

ಮೇಲೆ ಹೇಳಿದ ಎಲ್ಲ ಛಂದೋ ಮುದ್ರಗಳೂ ತಾಳ ಲಯಾನುಗುಣವಾಗಿವೆ. ಇಂಥವುಗಳನ್ನು ಹಳ್ಳಿಗಳಲ್ಲಿ ಹಳ್ಳಿಗರವೇ ಆದ ಹಲವು ಇಂಪಾದ ಧಾಟಿಗಳಿಂದ ಹಾಡಿರುವುದನ್ನು ನಾನು ಕೇಳಿದ್ದೇನೆ. ಈ ಯಾವ ಮುದ್ರಿಕೆಗಳಿಗೂ ಧಾಟಿ ಅಥವಾ ರಾಗದ ಅಪರಿಹಾರ್ಯ ಸಂಬಂಧವಿಲ್ಲ; ಅಂದರೆ ರಾಗ ನಿರ್ದೇಶವಿಲ್ಲ. ಛಂದೋಮಯ ವಾಣಿಯನ್ನು ಯಾವುದಾದರೊಂದು ರಸಾನುಗುಣವಾದ ರಾಗಚ್ಛಾಯೆಯಿಂದ ಛಂದೋ ವೈಲಕ್ಷಣ್ಯ ವ್ಯಂಜಕವಾಗಿ ಹಾಡುವುದು ಸಾಮಾನ್ಯ ಪದ್ಧತಿ. ಹೊಸಗನ್ನಡ ಛಂದೋಮಂದಿರವು

ಕಾಲಪ್ರಮಾಣ ಪ್ರಸಿದ್ಧವಾದ ಷಟ್ಪದಿಗಳ ತಪ್ಪಲಿನಲ್ಲಿರುವ ಕಲ್ಲುಗಳಿಂದ ಕಟ್ಟಲ್ಪಟ್ಟಿರುವುದರಿಂದ ಪೈತೃಕಗುಣ ಸಂಪನ್ನವಾದುದೇ ಆಗಿದೆ. 'ತಾಳ್ಯಾಕ, ತಂತ್ಯಾಕ, ರಾಗದ ಚಿಂತ್ಯಾಕ' ಎಂದು ಹಾಡಿದ ವರಕವಿಯು ತನಗೆ ತಾಳಲಯಗಳು ನೀರು ಕುಡಿದಹಾಗೆ ಜೀರ್ಣವಾಗಿ ರಕ್ತಗತವಾಗಿವೆ ಎಂಬುದನ್ನು ಸರಾಗವಾಗಿ ಸಲಿಲವಾಗಿ ತಾನು ಹೇಳಿದ ಛಂದದಲ್ಲೇ ಮೂಡಿಸಿದ್ದಾನೆ. ಇಂತಹ ಚಮತ್ಕಾರ ವ್ಯಂಜಕವಾಗಿ ಸಂಗೀತಮಯ ಹೃದಯದ ಕನ್ನಡಿಗರಲ್ಲಿ ಹೀಗೆ ಸ್ವಭಾವಸಹಜವಾದ ತಾಲಲಯಬದ್ಧ ಛಂದೋವೈಖರಿಯು ಅನಾದಿಕಾಲದಿಂದ ಹುಟ್ಟಿ ಬೆಳೆದು ಹೃದಯ ಸ್ಪರ್ಶಿಯಾಗಿ ಬಾಳುತ್ತಿರುವುದು ಹೆಮ್ಮೆಯ ಮಾತೇ ಸರಿ.[೧]

---

೧ ಇದೊಂದು ಸಂಕ್ಷೇಪವಾದ ಲೇಖ; ಕೇವಲ ದಿಗ್ದರ್ಶನಕ್ಕಾಗಿ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಲಾಗಿದೆ. ಉದಾಹರಣೆಯ ಮುಂದೆ * ಈ ಗುರುತಿದ್ದರೆ ಅಂಥದನ್ನು ಲೇಖಕ ಕೃತವೆಂದು ತಿಳಿಯತಕ್ಕದ್ದು. ಹೆಸರಿಲ್ಲದೆ ನರಳುತ್ತಿರುವ ಕೆಲವು ಛಂದೋ ಮುದ್ರೆಗಳಿಗೆ ಹೆಸರನ್ನು ತಾತ್ಕಾಲಿಕವಾಗಿ ಕೊಡಲಾಗಿದೆ. 'ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ' ಎಂಬ ನ್ಯಾಯಕ್ಕೆ ಅದು ಅನುಗುಣವಾಗಿದೆ. ಇಂದಿನ ಕಾವ್ಯಾಸಕ್ತರಿಗೆ ಅನುಕೂಲವಾಗಲೆಂದು ಛಂದೋ ಮಾರ್ಗದ ಕುರುಹನ್ನು ಮಾತ್ರ ಇಲ್ಲಿ ತೋರಿಸಲಾಗಿದೆ. ಈಶನ ಕರುಣೆಯ . . . ಶರಷಟ್ಪದಿಯನ್ನೇ ಸ್ವಲ್ಪ ಮಾರ್ಪಡಿಸಿ ಸಾಂಗತ್ಯಕ್ಕೆ ಉದಾಹರಣೆಯಾಗಿ ಕೊಟ್ಟಿರುವುದು ಸಾಂಗತ್ಯ ಅಥವಾ ಶರದ ಉತ್ಪತ್ತಿಯನ್ನು ಸೂಚಿಸುವಂಥದಿದೆ.

# ಹೊಯ್ಸಳಾನ್ವಯ ಪ್ರತಾಪ

## ೧ ಹೊಯ್ ಸಳ

### ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು

ಪ್ರಾಗಲ್ಭ್ಯಂ ಪ್ರಕಟೀಕುರುಷ್ವ ರಸನೇ ಯಾಚೇ ಕೃತಸ್ತೇಽಂಜಲಿಃ ।
ಕರ್ತವ್ಯಾ ತವ ಸೋಮಸಂಭವಕುಲಕ್ಷ್ಮಾಪಾಲಪಾಲಿಸ್ತುತಿಃ ॥
ಯದ್ವಾ ತತ್ತದನೇಕರಾಜವಿಜಯಕ್ರೀಡಾನಿಬದ್ಧಾಕ್ಷರ ।
ಶ್ಲೋಕ್ಯೇತಚ್ಛ್ರೋತ್ರ (ಸುಧಾ) ನಿರಂತರ ಘನಸ್ವಾದಾಯ ಕಾಭ್ಯರ್ಥನಾ ॥ ೧ ॥

[ ಬೆಂಗಳೂರು ೬ನೇ ಶಾಸನ ]

#### ಮೊದಲ ಮಾತು

ಎಲೇ ನಾಲಗೆಯೇ ! ಪ್ರಗಲ್ಭತೆಯನ್ನು ಪ್ರಕಟಮಾಡುವ ಸೋಮಸಂಭವ ಕುಲದಲ್ಲೊಗೆದ ರಾಜರ ಸ್ತುತಿಯನ್ನು ಮಾಡೆಂದು ನಿನ್ನನ್ನು ಅಂಜಲಿಬದ್ಧನಾಗಿ ಬೇಡಿ ಕೊಳ್ಳುವೆನು. ಒಂದು ವೇಳೆ ನೀನೊಲಿಯದಿದ್ದರೂ ಚಿಂತೆಯಿಲ್ಲ. ಆ ರಾಜವಿಜಯ ಕ್ರೀಡಾ ಸೂಚಕ ಶ್ಲೋಕಗಳಿಂದ ಸ್ರವಿಸುತ್ತಿರುವ ರಸಾಸ್ವಾದನೆಗಾಗಿ ನಿನ್ನನ್ನು ಅಭ್ಯರ್ಥನೆ ಮಾಡಲೇಕೆ !

ಭರತಖಂಡದಲ್ಲಿ ಆಳಿದ ರಾಜವಂಶಗಳಲ್ಲಿ ಸೂರ್ಯವಂಶ, ಚಂದ್ರವಂಶ ಎಂಬ ಎರಡು ಮನೆತನದವರೇ ಹೆಚ್ಚು. ಸೋಮವಂಶದಲ್ಲಿ ಹಲವು ಶಾಖೆಗಳಿವೆ. ಕನ್ನಡ ನಾಡಿನಲ್ಲಿ ಆಳಿದ ಅರಸು ಮನೆತನಗಳಲ್ಲಿ ದೋರಸಮುದ್ರದ ಹೊಯ್ಸಳರು ಸೋಮವಂಶದ ಒಂದು ಶಾಖೆಯವರು. ಸುಮಾರು ನಾಲ್ಕು ಶತಮಾನಗಳ ಕಾಲ ಮಹಾಪ್ರತಾಪಿ ಗಳಾಗಿಯೂ ಧಾರ್ಮಿಕರಾಗಿಯೂ ಈ ಅರಸರು ಆಳಿ ಕನ್ನಡ ನಾಡಿನ ಕೀರ್ತಿಧ್ವಜವನ್ನು ದಿಗಂತದವರೆಗೂ ಹಬ್ಬಿಸಿದರು. ಈ ರಾಜವಂಶವು ಕಣ್ಮರೆಯಾಗಿ ಆರು ಶತಮಾನ ಗಳಾದರೂ, ಅವರು ನಿರ್ಮಿಸಿದ ದೇವಾಲಯಗಳು ಕಲೆಯ ಬೀಡಾಗಿ ಇಂದಿಗೂ ಅವರ ಧವಳಕೀರ್ತಿಯ ಸ್ಮಾರಕವಾಗಿ ಪ್ರಪಂಚದ ನಾನಾ ಭಾಗಗಳಿಂದ ವೀಕ್ಷಕರನ್ನು ಆಕರ್ಷಿಸುತ್ತಲಿವೆ. ಈ ಹೊಯ್ಸಳವಂಶದ ರಾಜರ ಶೌರ್ಯ ಔದಾರ್ಯಗಳನ್ನು ಸ್ತುತಿ ಸಲು ಮಹಾ ಕವಿಗಳೇ ತಿಣಕುತ್ತಿರುವಾಗ ನನ್ನಂತಹ ಬಣಗು ಲೇಖಕನ ಬರಹಕ್ಕೆ ಗಮನಕೊಡುವವರಾರು ! ಆದರೂ ಚಿಂತಿಸಬೇಕಾದುದಿಲ್ಲ. ಪ್ರಾಚೀನ ಮಹಾ ಕವಿ ಗಳನ್ನೂ, ಇತಿಹಾಸಕಾರರನ್ನೂ ಆಶ್ರಯಿಸಿ, ಅವರು ಸೃಷ್ಟಿಸಿರುವ ಕಾವ್ಯಾರಣ್ಯದಿಂದ ಕೋಮಲ ಸುಮಗಳನ್ನಾರಿಸಿ, **"ಹೊಯ್ಸಳಾನ್ವಯ ಪ್ರತಾಪ"** ಎಂಬ ಕಂಠಮಾಲೆ ಯನ್ನು ರಚಿಸಿ ಕನ್ನಡ ನಾಡದೇವಿಯ ಆಭರಣವಾಗಿ ಅರ್ಪಿಸುವೆನು. ಆ ಕನ್ನಡಾಂಬೆಯ ಕೃಪಾದೃಷ್ಟಿ ಎಂಬ ವಜ್ರಾಂಗಿಯೇ ನನ್ನ ರಕ್ಷಾಕವಚ.

#### ಹೊಯ್ಸಳಾನ್ವಯ

ಸೋಮವಂಶದ ಹೊಯ್ಸಳಾನ್ವಯದ ಮೂಲ ಪುರುಷ ಸಳ. ಸಳನೃಪಾಲನಿಗೂ ಅವನ ಮಡದಿ ಭೂಮಿದೇವಿಗೂ ವಿನಯಾದಿತ್ಯ ಭೂಭುಜನು ಜನಿಸಿದನು. ವಿನಯಾದಿ

ತ್ಯನ ಮಗ ನೃಪಕಾಮ. ಅವನ ಮಗ ಇಮ್ಮಡಿ ವಿನಯಾದಿತ್ಯ. ಇವನು ಹೊಯ್ಸಳ ಜನಪತಿಗಳ ಕೀರ್ತಿಪುಂಡರೀಕವನ್ನು ಅರಳಿಸಿದ ಉದಯ ಭಾಸ್ಕರ. ಯುವರಾಜ ಎರೆಯಂಗನು ಅವನ ಪ್ರಿಯಪುತ್ರ. ಈ ಯುವರಾಜನಿಗೆ ಬಲ್ಲಾಳ, ಬಿಟ್ಟಿಗ ಅಥವಾ ವಿಷ್ಣುವರ್ಧನ ಮತ್ತು ಉದಯಾದಿತ್ಯ ಎಂಬ ಮೂವರು ತನಯರು. ವಿಷ್ಣುವರ್ಧನನು ಅತುಳೈಶ್ವರ್ಯವಂತನೂ, ದಾನಶೀಲನೂ ಎನಿಸಿಕೊಂಡು ಈ ಹೊಯ್ಸಳವಂಶದ ಸಪ್ತಮ ಚಕ್ರವರ್ತಿಯಾಗಿ ಕೀರ್ತಿಯಿಂದ ರಾಜ್ಯಭಾರ ಮಾಡಿದನು. ವಿಷ್ಣುವರ್ಧನನ ಮಗ ವೀರನರಸಿಂಹ. ಅವನ ಮಗ ವೀರಬಲ್ಲಾಳ; ತೆಂಕಣ ಚಕ್ರವರ್ತಿ ಎನಿಸಿದ ವೀರಬಲ್ಲಾಳನಿಗೆ! ಇಮ್ಮಡಿ ವೀರನರಸಿಂಹನೂ, ಅವನಿಗೆ ಸೋಮೇಶ್ವರನೂ ಉದಯಿಸಿದರು. ವೀರ ಸೋಮೇಶ್ವರನ ಪಟ್ಟದ ಮಹಿಷಿಯರಾದ ಸೋಮಲದೇವಿ, ಬಿಜ್ಜಳದೇವಿ, ಮತ್ತು ದೇವಲ ಮಹಾದೇವಿಯರೊಳಗೆ ಬಿಜ್ಜಳ ಮಹಾದೇವಿಗೆ ಮುಮ್ಮಡಿ ನರಸಿಂಹನೂ, ದೇವಳಮಹಾದೇವಿಗೆ ವೀರರಾಮನಾಥನೂ ಜನಿಸಿದರು. ವೀರನಾರಸಿಂಹ ಮತ್ತು ಅವನ ಅರಸಿ ಪಟ್ಟಮಹಾದೇವಿಯರ ಮಗನೇ ಮುಮ್ಮಡಿ ವೀರಬಲ್ಲಾಳ. ಇವನ ಮಗ ನಾಲ್ವಡಿ ವೀರ ಬಲ್ಲಾಳ. ಇವನೇ ಹೊಯ್ಸಳ ವಂಶದ ಕೊನೆಯ ಅರಸು.

## ೧ ಚಾರಿತ್ರಕ ವ್ಯಕ್ತಿ

**ಕಾಲ್ಪನಿಕ ವ್ಯಕ್ತಿಯೇ! :—** ಶಾಸನ ಸಾಹಿತ್ಯ ಮತ್ತು ಗ್ರಂಥ ಸಾಹಿತ್ಯಗಳಲ್ಲಿ ಸಳನೇ ಈ ವಂಶದ ಮೂಲ ಪುರುಷ ಎಂದು ತಿಳಿದುಬಂದಿದೆಯಾದರೂ, ಸಳ ಎಂಬ ರಾಜನಿದ್ದನೇ? ಎಂಬ ವಿಷಯದಲ್ಲಿ ಚಾರಿತ್ರಕ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವು ಅಭಿಪ್ರಾಯಗಳನ್ನು ಇಲ್ಲಿ ಉದಾಹರಿಸಲಾಗಿದೆ.

(ಅ) ರೋಂ ನಗರದ ನಿರ್ಮಾಪಕನಾದ ರಾಮುಲಸ್ಸನು. ಐತಿಹಾಸಿಕ ಪುರುಷನೋ, ಕಾಲ್ಪನಿಕ ವ್ಯಕ್ತಿಯೋ ಎಂಬ ಊಹಾಪೋಹಕ್ಕೆ ಎಡೆಯಾಗಿರುವಂತೆ ಈ ಹೊಯ್ಸಳವಂಶದ ಮೂಲಪುರುಷನಾದ ಸಳನ ವಿಷಯವೂ ಊಹೆಯಾಗಿಯೇ ಉಳಿದಿದೆ. ಅವನ ಕಾಲದ ಶಾಸನಗಳಾವವೂ ದೊರೆತಿಲ್ಲ.೧

(ಆ) ಸಳನು ಚಾರಿತ್ರಕ ವ್ಯಕ್ತಿಯಲ್ಲ; ಅವನು ಒಬ್ಬ ಕಾಲ್ಪನಿಕವೀರ. ಹೊಯ್ಸಳರ ವಂಶಾವಳಿಯನ್ನು ರಚಿಸುವಾಗ ಪೊಯ್ಸಳ ಎಂಬ ಕೊಂಚ ಚಮತ್ಕಾರವಾದ ಅವನ ಹೆಸರನ್ನು ಕಲ್ಪಿಸಿ ಸೇರಿಸಲಾಗಿದೆ.೨

(ಇ) ಹುಲಿ ಕಡಿದ ವೀರನಾದ ಇರುಂಗವೇಳನೇ ಸಳನಿರಬಹುದು ಎಂಬ ಒಂದು ಕಥೆಯೂ ಇದೆ.೩

(ಈ) ಕ್ರಿ. ಶ. ೨ನೆಯ ಶತಮಾನದಲ್ಲಿ ರಚಿತವಾದ ಪುರನಾನೂರು ಎಂಬ ತಮಿಳು ಗ್ರಂಥದಲ್ಲಿ ಒಂದು ದಂತಕಥೆ ಇದೆ. ಅದರ ಸಾರಾಂಶ ಏನೆಂದರೆ :— ಪರಾಂಬುನಾಡು ಎಂಬ ಮಲೆನಾಡಿನ ೩೦೦ ಹಳ್ಳಿಗಳ ಒಡೆಯ ವೇಲ್‌ಪಾರಿ. ಕಪಿಲಾರರು ಆ ರಾಜನ

---

೧ ಶ್ರೀ ಹಯವದನ ರಾಯರ ಹೊಸ ಮೈಸೂರು ಗೆಜಿಟಿಯರು ಸಂಪುಟ II ಪುಟ ೧೩೧೨-೧೩೧೩.

೨ ಶ್ರೀ ಡಾಕ್ಟರು ಫ್ಲೀಟರ ಕರ್ನಾಟಕ ರಾಜವಂಶಗಳು ಪುಟ ೪೮೧.

೩ ಶ್ರೀ K. V. ಸುಬ್ರಹ್ಮಣ್ಯ ಐಯ್ಯರವರು E I XII P ೧೨೨ ಅಡಿ ಟಿಪ್ಪಣಿ ೬.

ಆಶ್ರಿತ ಕವಿ. ರಾಜಪುತ್ರಿಯರಿಗೆ ವರಗಳನ್ನು ಹುಡುಕುತ್ತಾ ಮಲೆನಾಡಿನ ರಾಜ ಪುಲಿಕಡಿಮಾಲ್ ಇರುಂಗವೇಳ್‌ನ ಆಸ್ಥಾನಕ್ಕೆ ಹೋದನು. ಈ ಇರುಂಗವೇಳನು ತುವರಾಯಿ ರಾಜನಿಂದ ೪೯ನೆಯ ತಲೆಮಾರಿನ ರಾಜ. ಪುಲಿಕಡಿಮಾಲ್ ಎಂಬ ಆ ಇರುಂಗವೇಳನ ಬಿರುದಿಗೆ "**ಪುಲಿಕಡಿದವೀರ**" ಎಂದು ಅರ್ಥ.

ಈ ಕಥೆಯು ಸಳನ ಕಥೆಯನ್ನೇ ಹೋಲುವುದು. ತುವರಾಯಿ ಎಂದರೆ ಯಾದವರ ಮೂಲ ರಾಜಧಾನಿ "**ದ್ವಾರಕಿ**", ಹುಲಿಕಡಿದ ಸಂಗತಿಯೂ ಸಳನ ಹುಲಿಕೊಂದ ಘಟನೆ ಯನ್ನೇ ಹೋಲುತ್ತದೆ. ಅವನು ಮಲೆನಾಡಿನ ರಾಜನೂ ಹೌದು. ಈ ವಿವರಣೆಗಳಿಂದ ಇರುಂಗವೇಳನೇ ಸಳನಿರಬಹುದು. ೪

ಈ ರೀತಿ ಸಳನ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿರುವುದರಿಂದ ಇತಿಹಾಸ ಸಂಶೋಧನೆಯಿಂದ ನಿಶ್ಚಯಾಂಶವನ್ನು ನಿರ್ಧರಿಸುವುದು ಅತ್ಯಾವಶ್ಯಕವಾಗಿದೆ. ಇದು ವರೆಗೂ ಪ್ರಕಟವಾಗಿರುವ ಶಾಸನಗಳನ್ನೇ ಪುನರ್ವಿಮರ್ಶಿಸಿ, (೧) ಸಳನು ಕಾಲ್ಪನಿಕ ವ್ಯಕ್ತಿಯಲ್ಲ; ಅವನು ಒಬ್ಬ ಐತಿಹಾಸಿಕವೀರ. (೨) ಅವನಕಾಲದ ಶಾಸನಗಳೂ ಇವೆ. (೩) ಸಳನೂ ಸುದತ್ತಾಚಾರ್ಯರೂ ಸಮಕಾಲೀನರು. (೪) ಅವನ ಪಟ್ಟಾಭಿಷೇಕಕಾಲ. (೫) ಅವನ ಜೀವನಚರಿತ್ರೆಯ ಕೆಲವು ಘಟನೆಗಳು—ಈ ಮುಂತಾದ ವಿಷಯದಲ್ಲಿ ಹೊಸ ಬೆಳಕನ್ನು ತೋರಿಸಲು ಪ್ರಯತ್ನಿಸಿರುವೆನು.

## ೨ ಸಿರಿಪುರದ ಕಾಳಗ

**ಮೊರಲೆ ಅಗ್ರಹಾರ :** ಚಿಕ್ಕಮಗಳೂರು ಬಳಿ ಇರುವ ಮೊರಲೆಯು ಈಗ ಒಂದು ಹಳ್ಳಿ. ಸಳನಿಂದ ಇಮ್ಮಡಿ ವೀರಬಲ್ಲಾಳನ ಕಾಲದವರೆಗೂ ಬಂದು ಪ್ರಮುಖ ಅಗ್ರಹಾರ ವಾಗಿದ್ದು ಹೊಯ್ಸಳ ರಾಜರ ಕೃಪಾಕಟಾಕ್ಷಕ್ಕೆ ಪಾತ್ರವಾಗಿತ್ತು. "**ಪೊಯ್ಸಳ**" ನಾಮವು ಉಕ್ತವಾಗಿರುವ ಪ್ರಥಮ ಶಿಲಾಶಾಸನವು ಈ ಊರಿನಲ್ಲಿದೆ. ಶಕ ೯೧೬ನೆಯ ಜಯ ಸಂವತ್ಸರದಲ್ಲಿದ್ದ—ಜಾಕಬ್ಬೆಗಂತಿಯು ಈ ಊರಿನವಳು, ಈ ಊರಿನಲ್ಲಿ ಪ್ರತಿಷ್ಠಿ ತವಾದ ಶ್ರೀ ಕೇಶವ ದೇವಾಲಯಕ್ಕೆ ವಿಷ್ಣುವರ್ಧನದೇವನು ದೇವರಂ ನಮಸ್ಕರಿಸಲು ಬಂದು ದೇವಾಲಯದೊಳು ಕುಳ್ಳಿರ್ದು ಸಂತೋಷದಿಂದ ಆ ದೇವರಿಗೆ ಹೇರಳವಾಗಿ ದಾನಮಾಡಿದನು. ಅನಂತರ ವೀರನರಸಿಂಹನೂ, ಅವನ ಮಗ ಇಮ್ಮಡಿ ವೀರಬಲ್ಲಾಳನೂ ಈ ಮೊರಲೆ ಅಗ್ರಹಾರದ ಕೇಶವ ಮತ್ತು ಕಲಿದೇವರುಗಳಿಗೆ ದಾನಮಾಡಿರುವರು: ಈ ಅಗ್ರಹಾರವನ್ನು ಶ್ರೀ ವಿಷ್ಣುವರ್ಧನ ಕೇಶವಪುರ ಎಂದು ಸಂಬೋಧಿಸಲ್ಪಟ್ಟಿದೆ. ಮೊರಲೆ ಅಗ್ರಹಾರದಲ್ಲಿರುವ ಈ ಏಳು ಶಿಲಾ ಶಾಸನಗಳ ವಿಮರ್ಶೆಯಿಂದ ಸಳನು ಪೊಯ್ಸಳನಾಗು ವುದಕ್ಕೂ ಮುಂಚಿನಿಂದ ಈ ಅಗ್ರಹಾರವು ಹೊಯ್ಸಳರ ಪ್ರಮುಖ ಸ್ಥಳವಾಗಿತ್ತೆಂದು ಸಿದ್ಧವಾಗುವುದು.೫

೪ The Hoysala Vamsa by Sri William Coelho, pages 16—17.

೫ ಚಿಕ್ಕಮಗಳೂರಿನ ತಾಲ್ಲೂಕು ೧೩೬-೧೩೭-೧೩೮-೧೩೯-೧೪೦ ಮತ್ತು ೧೪೧ನೇ ಶಾಸನಗಳು ಮತ್ತು ೧೯೩೨ನೇ ಸಂವತ್ಸರದ ಶಾಸನ ಇಲಾಖಾ ವರದಿಯ ಆ ೩೭ನೇ ಶಾಸನ ಪುಟ ೨೦೦.

**ಪೊಯ್ಸಳನಾಮ ಉಕ್ತವಾಗಿರುವ ಪ್ರಥಮಶಾಸನ :** ಮೊರಲೆ ಗ್ರಾಮದ ಉಪಗ್ರಾಮ ಹೊಸಹಳ್ಳಿಗೆ ಪೂರ್ವ ಬೀರದೇವರ ಸಾರಿಗೆ ಹೊಲದಲ್ಲಿರುವ ಶಿಲಾಶಾಸನ.[೬]

೧ ಮಾನಂಜೆ಼ಗ್ರೆಯು ಕಲ್ನಟ್ಟು ಮಙ್ಗಳ
೨ ˚ಸ್ವಸ್ತಿ ಶ್ರೀ ಸಾಮನ್ತರಾಮನಣ್ಣಿಕನ್ದ
೩ ರ್ಪ ಸಿರಿವುರದೊ ಅಣ್ಣಿಗನೊಳ್ಕಾದಿ
೪ ಸತ್ತ ಅರಕೆಲ್ಲನ ಮಗ ಅವನ ಮ
೫ ಮ ಪೊಯ್ಸಳ ಮಾರುಗಂ ಅವರ ಪಗೆಗೆ
೬ ಅರೆಕೆಲ್ಲನ ಬೆಸದೊ ಮಹಾರಾಜನೊಳ್ಕಾದಿ
೭ ಸತ್ತ ಕೆಲ್ಲಗಾವುಣ್ಡ ಚಾಮೊನ್ತ ಚೂಡಾಮ
೮ ಣಿ ಚೆವಕೊಳ್ಗಣ್ಡ ಸಮರೈಕಪಾತ್ರ
೯ ಮಾಬ್ಬ್ರಲರಾಮ ಶ್ರೀಮತ್ ಅ
೧೦ ರಕೆಲ್ಲ ಕೊಟ್ಟ ಕೆಲ್ಲಗವುಣ್ಡ
೧೧ ಜೆ಼ಗ್

ಈ ವೀರಗಲ್ಲಿನ ಭಾಷೆ ಮತ್ತು ಲಿಪಿ ಎರಡೂ ಹಳಗನ್ನಡದಲ್ಲಿವೆ. ಪ್ರಚಲಿತ ಕನ್ನಡದಲ್ಲಿ ಇದನ್ನು ಈ ರೀತಿ ಅರ್ಥವಿಸಬಹುದು :—

ಸ್ವಸ್ತಿ, ಅರೆಕೆಲ್ಲನ ಮಗನಾದ ಅಣ್ಣಿಕಂದರ್ಪ ಎಂಬ ಬಿರುದಿನ ಶ್ರೀ ಸಾಮನ್ತ ರಾಯನು ಸಿರಿಪುರದ ಕಾಳಗದಲ್ಲಿ ಅಣ್ಣಿಗನೊಡನೆ ಕಾದುತ್ತಿದ್ದಾಗ ಸತ್ತನು. ಪೊಯ್ಸಳ ಮಾರುಗನು ಅವನ (ಅರೆಕೆಲ್ಲನ) ಮೊಮ್ಮಗ ; ಇವನೂ ಅಣ್ಣಿಗನೊಡನೆ ಕಾದಾಡುತ್ತಿದ್ದನು. ಕಾಳಗವು ದಾರುಣವಾಯಿತು. ಆಗ ದಳಪತಿಯಾದ ಶ್ರೀಮತು ಅರಕೆಲ್ಲನು ಸಿರಿವೂರಲ್ಲಿ ಇನ್ನೂ ಕಾದಾಡುತ್ತಿದ್ದವರಿಗೆ ಸಹಾಯ ಮಾಡುವಂತೆ ತನ್ನ ಸೇನಾನೀಕರನ್ನು ಹುರಿದುಂಬಿಸಿ, ಮಹಾರಾಜ ಅಣ್ಣಿಗನೊಡನೆ ಕಾದಾಡಲು ಬೆಸಸಿ ಕಳುಹಿಸಿದನು. ಆಗ ಕೆಲ್ಲಗೌಡನು ಶತ್ರುಗಳೊಡನೆ ಶೌರ್ಯದಿಂದ ಕಾದಿ ಸತ್ತನು. ಈ ವೀರಕೆಲ್ಲಗೌಡನ ಶೌರ್ಯವನ್ನು ಮೆಚ್ಚಿದ ಅರಕೆಲ್ಲನು ಒಂದು ವೀರಗಲ್ಲನ್ನು ನಿಲ್ಲಿಸಿ ಮಾನಂಗೆರೆಯನ್ನು ವೀರಕೊಡುಗೆಯಾಗಿ ಕೊಟ್ಟನು. ಮಂಗಳ.

ಈ ಶಾಸನದ ಉದ್ದೇಶ. ಶ್ರೀಮತು ಅರಕೆಲ್ಲನ ಪಕ್ಷಕ್ಕೂ, ನೊಳಂಬ ಪಲ್ಲವ ಮಹಾರಾಜ ಅಣ್ಣಿಗನಿಗೂ ಸಿರಿವೂರ ಬಳಿ ನಡೆದ ಕಾಳಗವನ್ನು ವಿವರಿಸುವುದೇ ಆಗಿದೆ ಈ ಕಾಳಗದಲ್ಲಿ ಅರಕೆಲ್ಲನ ಮಗ ಸಾಮನ್ತ ರಾಮನೂ ಮತ್ತು ಕೆಲ್ಲಗೌಡನೆಂಬ ವೀರನೂ ಮಡಿದರು. ಅರಕೆಲ್ಲನ ಮೊಮ್ಮಗ ಪೊಯ್ಸಳ ಮಾರುಗನೂ ಕಾದಾಡಿದನು.[೭] ಅರಕೆಲ್ಲನ ಹೆಸರು ಇದೇ ಮೊರಲೆ ಗ್ರಾಮದಲ್ಲಿರುವ ಇನ್ನೊಂದು ತುಂಡು ಶಿಲಾಶಾಸನದಲ್ಲಿಯೂ ಉಕ್ತವಾಗಿದೆ. ಉಳಿದ ಸಾಮನ್ತರಾಮ, ಪೊಯ್ಸಳ ಮಾರುಗ ಮತ್ತು ಕೆಲ್ಲಗೌಡ ಇವರ

---

೬ Inscription ೪೭ in MAR ೧೯೩೨.

೭ ಪೊಯ್ಸಳ ಮಾರುಗನು ಈ ಕಾಳಗದಲ್ಲಿ ಮಡಿದನೆಂದು ಶ್ರೀ ಎಂ. ಎಚ್. ಕೃಷ್ಣರು ಅಭಿಪ್ರಾಯಪಟ್ಟಿದ್ದಾರೆ. ಈ ಶಾಸನದಲ್ಲಿ ಸತ್ತ ಎಂಬ ಶಬ್ದ ಉಪಯುಕ್ತವಾಗಿಲ್ಲ. MAR ೧೯೩೨ ಪುಟ ೨೦೧.

ಹೆಸರು ಮತ್ತೆಲ್ಲಿಯೂ ಉಕ್ತವಾಗಿರುವುದು ದೊರೆತಿಲ್ಲ. ಶಾಸನದ ತೇದಿಯೂ ಅದರಲ್ಲಿ ಉಕ್ತವಾಗಿಲ್ಲ. ಆದ್ದರಿಂದ ಅರಕೆಲ್ಲನ ಕಾಲ ಕಂಡು ಹಿಡಿಯುವುದು ಕಷ್ಟವಾಗಿದೆ. ಕಾಳಗ ನಡೆದ ಸಿರಿವೂರು ಯಾವದು? ಮಹಾರಾಜ ಅಣ್ಣಿಗನು ಯಾರು ಮತ್ತು ಅವನ ಜೀವನ ಚರಿತ್ರೆ ಏನು? ಅವನು ಆಳಿದ ಕಾಲ ಇತ್ಯಾದಿ ವಿಷಯಗಳು ನಿರ್ಧರವಾಗ ಬೇಕಾಗಿದೆ. ಆಗಲೇ ಈ ಶಾಸನದ ಕಾಳಗ ಸಂಭವಿಸಿದ ಕಾಲವು ಗೊತ್ತಾಗುವುದು.

**ಸಿರಿವೂರು:** ಅರಕೆಲ್ಲ–ಅಣ್ಣಿಗರ ಮಧ್ಯೆ ನಡೆದ ಕಾಳಗದ ರಣಭೂಮಿಯಾದ **ಸಿರಿವೂರು** ಈಗ ಚಿಕ್ಕಮಗಳೂರು ತಾಲ್ಲೂಕಿನಲ್ಲಿರುವ ಸಿರಿಗುಂದವೇ ಆಗಿರಬೇಕೆಂದು ಅಭಿಪ್ರಾಯಪಡಲಾಗಿದೆ.[೮] ಅಣ್ಣಿಗ-ಗಂಗ ರಾಚಮಲ್ಲರಿಗೆ ನಡೆದ ಕಾಳಗವನ್ನು ವಿವರಿಸುವ ಒಂದು ಶಿಲಾಶಾಸನದಲ್ಲಿ[೯+೧೦] ಸಿರಿವೂರ ಹಳ್ಳ ಎಂದು ಉಕ್ತವಾಗಿದೆ. ರಾಷ್ಟ್ರಕೂಟರ ಕಿರಿಯ ಮನೆತನದ ಇಂದ್ರಾತ್ಮಜನು ಶ್ರೀಪುರದ ಕವನದಲ್ಲಿ ಪಲ್ಲವೇಶರನ್ನು ಇರಿದು ಕೊಂದನು ಎಂದು ಇಸಾಮುದ್ರದ ಶಿಲಾಶಾಸನವು[೧೧] ಸಾರುತ್ತಿದೆ. ಇಲ್ಲಿ ಪಲ್ಲವೇಶರು ಎಂದರೆ ನೊಳಂಬ ಪಲ್ಲವರು ಎಂಬುವರಲ್ಲಿ ಸಂದೇಹವಿಲ್ಲ. ಈ ರೀತಿ ಅಣ್ಣಿಗನ ಕಾಲದಲ್ಲಿ ಸಿರಿವೂರು ಒಂದು ಮುಖ್ಯವಾದ ರಣರಂಗವಾಗಿತ್ತು.

**ಅಣ್ಣಿಗನ ಜೀವನ ಚರಿತ್ರೆ:** ಅಣ್ಣಿಗನು ನೊಳಂಬವಾಡಿ ೩೨,೦೦೦ ರಾಜ್ಯದ ಅಧಿಪತಿಗಳಾದ ನೊಳಂಬ ಪಲ್ಲವರ ರಾಜ. ನೊಳಂಬರು ಕಂಚಿಯ ಪಲ್ಲವ ಸಮ್ರಾಟರ ಒಂದು ಶಾಖೆಯವರು. ನೊಳಂಬ ಪಲ್ಲವರ ರಾಜಧಾನಿ ಹೆಂಜೇರು ಅಥವಾ ಹೇಮಾವತಿ. ಇವರ ೧೩ ತಲೆಮಾರಿನ ರಾಜರು ಆಳಿರುವರೆಂದು ಪ್ರಭುರಾಮ ಮಂಗಳದ ತಾಮ್ರ ಶಾಸನದ ವಿಷಯ ಪ್ರಕಟಿಸುವ ಸಂದರ್ಭದಲ್ಲಿ ತೋರಿಸಿದ್ದೇನೆ[೧೨] ಇವರಲ್ಲಿ ಮಹೇಂದ್ರನು ಪ್ರಸಿದ್ಧನಾದ ರಾಜ. ಅವನ ಮಗ ನನ್ನಿಗ. ಇವನ ಹಿರಿಯ ಮಗನೇ ಅಣ್ಣಿಗ. ಇವನ ಇನ್ನೊಂದು ಹೆಸರು ಬೀರನೊಳಂಬ. ಇವನ ಮಗ ಇರುಳಚೋರ. ದಿಲೀಪ ಅಥವ ಇರಿವ ನೊಳಂಬನು ಅಣ್ಣಿಗನ ತಮ್ಮ.

### ವಂಶವೃಕ್ಷದ ಒಂದು ಭಾಗ




ಶ್ರೀ ಪೃಥುವಿ ವಲ್ಲಭ, ಪಲ್ಲವ ಕುಲತಿಲಕ, ಪಲ್ಲವರಾಮ ಮೊದಲಾದವು ಈ ರಾಜರ

---

೮ ಅದೇ. ೯+೧೦ ತಿಪಟೂರು ೧೦-೧೧ನೇ ಶಾಸನಗಳು.

೧೧ ಚಿತ್ರದುರ್ಗ ೭೬ನೇ ಶಾಸನ.

೧೨ ಪ್ರಭುರಾಮ ಮಂಗಳದ ತಾಮ್ರಶಾಸನ; ಪ್ರಬುದ್ಧ ಕರ್ಣಾಟಕ: ಸಂಪುಟ ೩೪ ಸಂಚಿಕೆ ೨ ಪುಟ ೬೯-೮೬.

ಮುಖ್ಯ ಬಿರುದುಗಳು. ಪೃಥಿವೀವಲ್ಲಭರು ಎಂದಿರುವುದರಿಂದ ಇವರು ಸ್ವತಂತ್ರ ರಾಜರು ಎಂದು ವ್ಯಕ್ತವಾಗುತ್ತದೆ. ಮಹೇನ್ದ್ರನಿಂದ ಅಂತ್ಯದವರೆಗೂ ಸ್ವತಂತ್ರವೇ ಆಗಿದ್ದರು.

ನನ್ನಿಗ ಐಯ್ಯಪ್ಪನು ಕ್ರಿ. ಶ. ೯೧೮ ರಿಂದ ೯೩೪ರ ವರೆಗೂ ರಾಜ್ಯವಾಳಿದ ಆಧಾರಗಳಿವೆ. ಅನಂತರ ಚಾಳುಕ್ಯ ಭೀಮನಿಂದ ರಣರಂಗದಲ್ಲಿ ಕೊಲ್ಲಲ್ಪಟ್ಟನಂತರ ಇವನ ಹಿರಿಯ ಮಗನಾದ ಅಣ್ಣಿಗನು ರಾಜ್ಯಸೂತ್ರವನ್ನು ವಹಿಸಿದನು. ಈ ಅಣ್ಣಿಗ ಬೀರನೊಳಂಬನು ತನ್ನ ತಂದೆಯ ಕಾಲದಲ್ಲಿಯೇ ಪ್ರಾಂತ್ಯಾಧಿಕಾರಿಯಾಗಿ ರಾಜ್ಯವಾಳುತ್ತಿದ್ದನು. ಶಕ ೮೪೧ನೆಯ ವಿಕ್ರಮ ಸಂವತ್ಸರದಲ್ಲಿ (೯೧೯ ಕ್ರಿ. ಶ.) ಅಣ್ಣಯ್ಯನು ಪ್ರಾಂತ್ಯಾಧಿಕಾರಿಯಾಗಿ ಆಳುತ್ತಿದ್ದು ಮುಷ್ಟೂರು ಗ್ರಾಮದ ಈಶ್ವರ ದೇವಾಲಯದ ಪಾಣಿಪಟ್ಟ ಸಹಿತವಾದ ವಿಗ್ರಹವನ್ನು ಮಾಡಿಸಿದ ದೇವರ ದಾಸನಾಥವರ್ಮನಿಗೋಸ್ಕರ ಶಿಲಾ ಶಾಸನವನ್ನು ಮಾಡಿಸಿದನು.[೧೩] ಶಕ ೮೫೩ನೆಯ ವಿರೋಧಿ ಸಂವತ್ಸರದಲ್ಲಿ ಚಿಂತಾಮಣಿ ಬಳಿಯಲ್ಲಿ ಆಳುತ್ತಿದ್ದನು.[೧೪] ಶಕಕಾಲ ೮೫೮ (ಕ್ರಿ. ಶ. ೯೩೬)ರಲ್ಲಿ ಬೀರನೊಳಂಬ ಅಣ್ಣಯ್ಯನು ಮಡಕಶಿರಾ ಬಳಿಯಲ್ಲಿ ಆಳುತ್ತಿದ್ದನೆಂದು ಗುನಿಮೊರು ಬಾಗಿಲಿನ ಶಾಸನದಿಂದ ಗೊತ್ತಾಗುವುದು.[೧೫] ಗಂಗವಂಶದರಾಜ ಪೃಥ್ವೀಪತಿಗೂ ನೊಳಂಬ ಐಯ್ಯಪ್ಪನ ಮಗ ಬೀರನೊಳಂಬನಿಗೂ ನಡೆದ ಒಂದು ಕಾಳಗದಲ್ಲಿ ಗಂಗರ ಪಕ್ಷದ ಒಬ್ಬ ವೀರನು ಮಡಿದನು ಎಂದು ತಾತನ ಕಲ್ಲು ಶಾಸನದಲ್ಲಿ ಉಕ್ತವಾಗಿದೆ.[೧೬] ಆದರೆ ಈ ಕಾಳಗದ ಕಾಲ ಆ ಶಾಸನದಿಂದ ಗೊತ್ತಾಗುವುದಿಲ್ಲ. ಶಕ ೮೫೮ರಿಂದ ಈಚೆಗೆ ಅಣ್ಣಿಗನ ಶಾಸನಗಳು ದೊರೆತಿಲ್ಲ. ಶಕ ೮೬೪ನೆಯ ಶೋಭಕೃತು ಸಂವತ್ಸರದಲ್ಲಿ (ಕ್ರಿ. ಶ. ೯೪೨ರಲ್ಲಿ) ಅಣ್ಣಿಗನ ತಮ್ಮನಾದ ಇರಿವನೊಳಂಬ ದಿಲಿಪರಸನು ಪೃಥುವೀ ರಾಜ್ಯಂಗಯ್ಯುತ್ತಿದ್ದನು ಎಂದು ಹೇಮಾವತಿ ಶಿಲಾಶಾಸನದಿಂದ ವ್ಯಕ್ತವಾಗುವುದು.[೧೭] ಈ ಎರಡು ಕಾರಣಗಳೂ ಅಣ್ಣಿಗನು ಅದಕ್ಕೆ ಮುಂಚೆಯೇ ಮಡಿದನೆಂಬ ಸಂಗತಿಯನ್ನು ಸ್ಪಷ್ಟಪಡಿಸುವುವು. ಇವೂ ಅಲ್ಲದೆ ಕ್ರಿ. ಶ. ೯೪೦ನೆಯ ಸಂವತ್ಸರದ ವಿವೋಳಿ ತಾಮ್ರಶಾಸನದಲ್ಲಿ[೧೮] "ಅಣ್ಣಿಗನ ಪಲ್ಲವನಿಗೆ ವಿಪತ್ತಿಯನ್ನುಂಟುಮಾಡಿತು" ಎಂಬ ವಿಷಯವೂ ಸಹಾಯಕವಾಗುವುದು.

ಕರ್ನಾಟಕದ ಇತಿಹಾಸದಲ್ಲಿ ಅಣ್ಣಿಗ ಮಹಾರಾಜನ ಸ್ಥಾನವು ಮುಖ್ಯವಾದುದು. ನೊಳಂಬ ಪಲ್ಲವರಿಗೂ ತಲಕಾಡು ಗಂಗರಿಗೂ ನೊಳಂಬಾದಿ ರಾಜನ ಕಾಲದಿಂದಲೇ ಬಾಂಧವ್ಯ ಉಂಟಾಗಿತ್ತು. ನೊಳಂಬಾದಿ ರಾಜನ ತಂಗಿಯನ್ನು ರಾಜಮಲ್ಲ ಪೇರ್ಮಾಡಿಯು ವಿವಾಹವಾದನು. ಈ ಗಂಗ ದಂಪತಿಗಳಿಗೆ ನೀತಿಮಾರ್ಗ ಪೇರ್ಮಾಡಿ ಎಂಬ ರಾಜಕುಮಾರನೂ ಜಯಬ್ಬೆ ಎಂಬ ರಾಜಕುಮಾರಿಯೂ ಜನಿಸಿದರು. ನೊಳಂಬಾದಿ ರಾಜನು ತನ್ನ ತಂಗಿಯ ಮಗಳು ಜಯಬ್ಬೆಯನ್ನು ಬಹುಶಃ ವೃದ್ಧಾಪ್ಯದಲ್ಲಿ ತನ್ನ ಕಿರಿಯ

---

೧೩ ಜಗಳೂರು ೨೯ ಮುಷ್ಟೂರು ಶಾಸನ.

೧೪ ಚಿಂತಾಮಣಿ ೪೩-೪೪ನೇ ಶಾಸನಗಳು.

೧೫ MAR ೧೯೧೬ No. ೭೫೯ of Appendix B.

೧೬ ಮೈಸೂರು ಶಾಸನ ಇಲಾಖಾ ೧೯೨೫ನೇ ಸಂವತ್ಸರ ವರದಿ ೮೬ನೇ ಶಾಸನ.

೧೭ ಹೇಮಾವತಿ ಶಾಸನ ಸಿರಾ ೨೮ನೆಯ ಶಾಸನ.

೧೮ ದಿವೊಳಿ ತಾಮ್ರಶಾಸನ. ಶ್ರೀ ಭಂಡಾರಕರ್ ಅವರ ದಕ್ಷಿಣ ಪ್ರಾಚೀನ ಇತಿಹಾಸ. (Early History of the Deccan P. ೩೧೫.)

ರಾಣಿಯಾಗಿ ವಿವಾಹವಾದನು. ಈ ದಂಪತಿಗಳ ಮಗನೇ ಮಹೇಂದ್ರ ರಾಜ. ಹೀಗೆ ಇವರೀರ್ವರಿಗೂ ದೇಹಸಂಬಂಧವಿದ್ದರೂ ಮಹೇಂದ್ರನ ರಾಜ್ಯವಿಸ್ತಾರವನ್ನು ಗಂಗರು ಸಹಿಸಲಿಲ್ಲ. ಮಹೇನ್ದ್ರನನ್ನು ಗಂಗ ರಾಜಕುಮಾರ ಇಮ್ಮಡಿ ಎರೆಯಂಗನು ದಾರುಣ ವಾದ ಯುದ್ಧದಲ್ಲಿ ಕೊಂದು ಮಹೇಂದ್ರಾಂತಕ ಎಂಬ ಬಿರುದನ್ನು ಧರಿಸಿದನು. ಈ ಕೊಲೆಯಿಂದ ಈ ಬಂಧುಗಳಿಗೆ ಮಹಾದ್ವೇಷವುಂಟಾಯಿತು. ಮಹೇಂದ್ರನ ಮಗ ನನ್ನಿಗ–ಐಯ್ಯಪ್ಪನೂ, ಇವನ ಮಗ ಅಣ್ಣಿಗ–ಬೀರನೊಳಂಬನೂ ತಲಕಾಡು ಗಂಗ ಎರೆಯಪ್ಪ, ಅನಂತರ ಅವನ ಇಬ್ಬರು ಹಿರಿಯ ಮಕ್ಕಳು ನರಸಿಂಹದೇವ ಮತ್ತು ರಾಜ ಮಲ್ಲರಮೇಲೆ ದ್ವೇಷ ಸಾಧಿಸುತ್ತಾ ಬಂದರು. ಈ ದ್ವೇಷದ ಹಟಮಾರಿತನದಿಂದ ರಾಜ ಮಲ್ಲನಿಗೂ, ಅಣ್ಣಿಗನಿಗೂ ಕೊತ್ತಮಂಗಳದ ಬಳಿ ದಾರುಣವಾದ ಯುದ್ಧವು ನಡೆಯಿತು. ಈ ಯುದ್ಧವನ್ನು ಮಾರಸಿಂಹನ ಕೂಡಲೂರು ತಾಮ್ರಶಾಸನದಲ್ಲಿ ವರ್ಣಿಸಿದೆ. ೧೯

## ಕೊತ್ತಮಂಗಲದ ಕಾಳಗ

ವೃ॥ ತಸ್ಯಾನುಜೋ ಯೋಽಜನಿ ರಾಜಮಲ್ಲೋ ನಾಮ್ನಾದಿನಾ ದುರ್ಧ್ಯ ರಾಜಮಲ್ಲಃ ।
ಪೂರ್ವಾವನೀಪಾಲಕನೀತಿಮಾರ್ಗೋ ನಾಮ್ನಾ ಪರೇಣಾಪಿ ಚ ನೀತಿಮಾರ್ಗಃ ।
ಪಾದಾತಂ ಶರಪಂಜರೈರವಿರಲೈರಶ್ವೀಯಮುಗ್ರಾಸಿನಾ ।
ಹತ್ವಾ ಹಸ್ತಿಕಮೇಕಗಂಧಕರಿಣಾ ಮೂರ್ತ್ಯಾ ನೊಲಂಬಣ್ಣಿಗಂ ।
ಜಿತ್ವಾ ವಿಶ್ರುತ ಕೊತ್ತಮಂಗಲರಣೇ ಬಾಣೈ ಸ್ತ್ರಿಭಿರ್ಮುದ್ರಿತಂ ।
ಕೃತ್ವಾ ಬಿಭ್ಯತಮುತ್ಯುವಾಹ ಕೃಪಯಾ ಶ್ರೀರಾಜಮಲ್ಲಾಧಿಪಃ ॥
ಸತು ನೀತಿಮಾರ್ಗ ಕೊಂಗುಣಿವರ್ಮ ಧರ್ಮ ಮಹಾರಾಜಾಧಿ
ರಾಜ ಪರಮೇಶ್ವರಃ ಶ್ರೀ ರಾಜಮಲ್ಲ ಪ್ರಥಮ ನಾಮಧೇಯಃ ಕಚ್ಚೆಯ ಗಂಗಂ ॥

[ಕೂಡಲೂರು ತಾಮ್ರ ಶಾಸನ]

ನರಸಿಂಹ ದೇವನ ತಮ್ಮನು ದುರುಳರಾದ ಶತ್ರುರಾಜರನ್ನು ಜಯಿಸಿ ರಾಜಮಲ್ಲ ಎಂಬ ಪ್ರಥಮ ನಾಮವನ್ನು ಹೊಂದಿದನು. ಪೂರ್ವರಾಜರು ಅನುಸರಿಸುತ್ತಿದ್ದ ನೀತಿಮಾರ್ಗದಲ್ಲಿಯೇ ನಡದು ನೀತಿಮಾರ್ಗ ಎಂಬ ಇನ್ನೊಂದು ಹೆಸರನ್ನುಪಡೆದನು. ತನ್ನ ಬಾಣಗಳಿಂದ ಶತ್ರುಪಕ್ಷದ ಪದಾತಿಯನ್ನೂ, ತನ್ನ ಹರಿತವಾದ ಕತ್ತಿಯಿಂದ ಅಶ್ವಬಲವನ್ನೂ, ತನ್ನ ನೆಚ್ಚಿನ ಒಂದೇ ಗಂಧಗಜದಿಂದ ಆನೆಯ ಸೇನೆಯನ್ನೂ ಸಂಹರಿಸಿ, ನೊಳಂಬ ಅಣ್ಣಿಗನನ್ನು **ಕೊತ್ತಮಂಗಳದ** ರಣರಂಗದಲ್ಲಿ ಜಯಿಸಿದನು. ಬಾಣಗಳ ಗಾಯಗಳಿಂದ ನೊಂದು ನಡುನಡುಗಿ ಭಯಭ್ರಾಂತನಾದ ಆ ಶತ್ರುವಿಗೆ ಅಪಾರವಾದ ಕೃಪೆಯನ್ನು ತೋರಿಸಿ, ಅಭಯದಾನಮಾಡಿ, ಆಶ್ರಯವಿತ್ತನು. ಈ ರಾಜಮಲ್ಲನಿಗೆ ಕಚ್ಚೆಯ ಗಂಗ ಎಂಬುದು ಇನ್ನೊಂದು ಹೆಸರು.

ಗಂಗ-ನೊಳಂಬರ ಈ ಯುದ್ಧವು ತುರುಗಾಳಗದಿಂದ ಆರಂಭವಾಯಿತು. ಮೊದಲು ನೊಳಂಬನ ಸೇನೆಯು ದಾಳಿ ಬಂದು ಕರುವೂರಿನ ತುರುಗಳನ್ನು ಕದ್ದೊಯ್ದು ಹೆಮ್ಮಾಗೆಯಲ್ಲಿ ಬಚ್ಚಿಟ್ಟಿತು. ಕಚ್ಚೆಯ ಗಂಗನ ವೀರರು ಸಮ್ಮನಿರುವರೆ. ಕಳ್ಳರನ್ನು

---

೧೯ ಕೂಡಲೂರು ತಾಮ್ರಶಾಸನ MAR ೧೯೨೧ Page ೧೧ Lines ೪೦-೪೩

ಗಂಗನ ದಂಡಾಳುಗಳು ಹಿಂಬಾಲಿಸಿ ಹೋಗಿ ಪರಿದಾಡಿ ಎದುರು ಬಲವನ್ನೂ, ಅವರ ಮನವನ್ನೂ (ದುಷ್ಟನಡತೆಯನ್ನೂ ಮೂದಲಿಸಿ ಆ ತುರುಗಳನ್ನು ಬಿಡಿಸಿಕೊಂಡು ಬಂದು **ಸಿರಿಪುರದ** ಹಳ್ಳದ ಬಳಿ ಸುರಕ್ಷಿತವಾಗಿಟ್ಟರು. ಆಗ ಗಂಗರಪಕ್ಷದ ಕದ್ದೆರಯ್ಯನ ಮಗ ಗುಜ್ಜನಂದಿಯು ಶತ್ರುಗಳೊಡನೆ ಹೋರಾಡಿ ವೀರಸ್ವರ್ಗವನ್ನೇರಿದನು.[೨೦] ಈ ತುರು ಪರಿಯಲಿ ನಾಗವಾರಯ್ಯ, ಬೆಳ್ಳತ್ಥಣದ ಗವುಡ ಇವರು ಸತ್ತರು.[೨೧] ಕೊತ್ತಮಂಗಳದ ಕಾಳಗವು ಬಹಳ ಭೀಕರವಾಗಿತ್ತೆಂಬುದನ್ನು ಮೇಲೆ ಉದಹರಿಸಿರುವ ಮಾರಸಿಂಹ ತಾಮ್ರ ಶಾಸನದಲ್ಲಿ ವಿವರಿಸಿದೆಯಷ್ಟೆ. ನೊಳಂಬ ಅಣ್ಣಿಗನ ಪಕ್ಷದ ವೀರಗಲ್ಲುಗಳೂ ಕೊತ್ತಮಂಗಳದ ಕಾಳಗವು ಭೀಕರವಾಗಿತ್ತೆಂಬುದನ್ನು ಹೇಳಿವೆ. ಬಿಲ್ಲ ಕೊತ್ತಮಙ್ಗಲದೊಳ್ಗೆ ನೊಳಂಬಾದಿ ರಾಜ ಅಣ್ಣಿಗನು ಗಂಗರುಂ ತಾನುಂ ಒಡ್ಡಿ ಅಂದರೆ ಸುತ್ತುವರಿದುಕೊಂಡು ಕಾದಿದನು. ಆಗ ನೊಳಂಬನ ಸೈನಿಕ ಭೀಮಯ್ಯನ ಮಗ ಪೆರ್ಗಡೆ ಬೆಣಾಮಯ್ಯನು ಗಂಗರ ಆನೆಯ ಕುಂಭಸ್ಥಳಕ್ಕೆ ತನ್ನ ಕುದುರೆಯನ್ನು ಹಾಯಿಸಿ ಹೊಡೆದನು. ಆನೆಯ ರಾವುತನಿಗೆ ಕುದುರೆಯ ರಾವುತನು ಸಮನಾದ ಆಳೆ! ಬೆಣಾಮಯ್ಯನು ಸತ್ತನು. ಈ ಶೌರ್ಯಕ್ಕೆ ಅಣ್ಣಿಗನು ಮೆಚ್ಚಿ ಕಲಿಯೂರೆಂಬ ಒಂದು ಗ್ರಾಮವನ್ನೇ ಕೊಡುಗೆಯಾಗಿ ಕೊಟ್ಟನು.[೨೨] ಈ ರಣರಂಗವು ಅತಿ ಭಯಂಕರವಾಗಿತ್ತೆಂಬುದನ್ನು ಪಕ್ಕದ ವೀರಗಲ್ಲಿನಲ್ಲಿರುವ ಒಂದು ವೃತ್ತದಿಂದ ವ್ಯಕ್ತವಾಗುವುದು.

ಅರಿ ನರಪರ್ಕಳುಕ್ಕಿ ತರಿಸನ್ದಿದಿರೊಳ್ನಿಲೆ ಪೊಳ್ದಿ ವೈರಿ ಭೂ . . . ।
. . . . ದಾನಿ ಸಮ ನಿನ್ನನ ನೀ ಬೆಸಸೆನ್ದು ಬನ್ದು ನನ್ನ ।
ನರಪತಿ ಮೆಚ್ಚಿನಚ್ಚಿ ಬೆಸ ವೀ . . . . . ತಾಗಿ ಗಂ ।
ಗರ ಮದ ಕುಂಭಿ ಕುಂಭವಲೆ ಪಾಯ್ದಿರಿದು ಬೆನಗಂ ಸತ್ತಂ ॥

ತನ್ನ ಸಂಬಂಧಿಗಳೆಂಬುದನ್ನೂ ಲಕ್ಷಿಸದೆ ತಲಕಾಡು ಗಂಗರ ಮೇಲೆ ಏರಿ ಹೋಗಿ, ಅವರ ತುರುಗಳನ್ನು ಸೆರೆಹಿಡಿದು ದಕ್ಕಿಸಿಕೊಳ್ಳಲಾರದೆ, ತುರುಗಳನ್ನು ಹಿಂದಕ್ಕೆ ಬಿಟ್ಟು ಕೊಟ್ಟನು. ಗಂಗರ ಬಲವು ಕೊತ್ತಮಂಗಲದ ಕೋಟೆಯನ್ನು ರಕ್ಷಿಸುತ್ತಿದ್ದಾಗ, ಅದನ್ನು ಮುತ್ತಿ ಗಂಗರ ಆನೆಯ ರಾವುತರ ಯುದ್ಧಕ್ಕೆ ಹೆದರಿಹೋಗಿ ಗಂಗರಿಗೆ ಶರಣಾಗತನಾಗಿ ಬಂದನು. ಗಂಗರು ರಾಜನೀತಿಯನ್ನು ಚನ್ನಾಗಿ ಬಲ್ಲವರು; ಆದ್ದರಿಂದಲೇ ಅವರಿಗೆ ನೀತಿ ಮಾರ್ಗರೆಂಬ ಅನ್ವರ್ಥನಾಮವು ಪ್ರಸಿದ್ಧವಾಗಿದೆ. ದಯೆಯೇ ಧರ್ಮದ ಮೂಲವಯ್ಯ! ದಯೆಯು ಕೊಡುವವನನ್ನೂ, ಕೊಳ್ಳುವವನನ್ನೂ ಹರಸುವುದು. ಆದರಿಂದ ಉರ್ವರಿಗೂ ಸುಖ ಸೌಭಾಗ್ಯಗಳು ದೊರಕುವುವು. ಶರಣಾಗತರನ್ನು ರಕ್ಷಿಸುವುದು ಭಾರತೀಯರ ಸಂಸ್ಕೃತಿ ಮತ್ತು ಸದ್ಧರ್ಮ. ನೀತಿ ಮಾರ್ಗಣದ ರಾಜಮಲ್ಲನು ಶರಣುಬಂದ ಅಣ್ಣಿಗನನ್ನು ಕೃಪೆಯಿಂದ ಭರಣಮಾಡಿದನು: ಶತ್ರುಗಳು ಮಿತ್ರರಾದರು.

## ಅಣ್ಣಿಗನ ವಿಪತ್ತು

ಶ್ರೀವಲ್ಲಭೇನ ನಿಹತೌ ಭುವಿ ದಂತಿಗ ವಪ್ಪುಗೌ ದುಷ್ಟೌ
ರಚ್ಛವಮಲ್ಲ ವಿಷದ್ರುಮಂ ಉದಸ್ಯ ನಿಹತೇನ ಯೋಕೃತ ಸನಾಥಾಂ ।     ॥ ೨೭ ॥

---

೨೦ ತಿಪಟೂರು ೧೦ ; ೨೧ ತಿಪಟೂರು ೧೧.

೨೨ ಮದ್ದಗಿರಿಯ ತಾಲ್ಲೂಕು ಕುಲದೇವರ ಪುರದ ವೀರಗಲ್ಲುಗಳು ೭೧ ಮತ್ತು ೭೨.

ಭೂತಾರ್ಯಪುಣ್ಯತರುಣಾ ವಾಟೀಮಿವ ಗಂಗಪಾಟೀಂ ಚ ॥ ೨೮ ॥
ಪರಿಮಲಿತಾಣ್ಣಿಗ ಪಲ್ಲವವಿಪತ್ತಿರಾಸೀತ್ ನ ವಿಸ್ಮಯಸ್ಥಾನಂ
ವಿಸ್ಫುರತಿ ಯತ್ರ ತಾಪೇ ಶೋಷಿತವಿದ್ವೇಷಿ ಗಾಂಗಾಘೇ ೨೩ ॥ ೨೯ ॥

ಜಯದಿಂದ ಉಬ್ಬಿದ ರಾಜಮಲ್ಲನೀತಿಮಾರ್ಗನು ಅನೀತಿಮಾರ್ಗನಾದನು, ಗಂಗವಂಶವೆಂಬ ಅಮೃತವನದಲ್ಲಿ ಹುಟ್ಟಿದ್ದ ಅಮೃತವೃಕ್ಷವು ವಿಷವೃಕ್ಷವಾಯಿತು. ಈ ವಿಷವೃಕ್ಷವನ್ನು ಕಿತ್ತು ಹಾಕದಿದ್ದರೆ ತಲಕಾಡು ಗಂಗವನವನ್ನೆಲ್ಲಾ ಆಕ್ರಮಿಸಿ, ನಾಶ ಮಾಡುವುದು ಎಂದು ಅಂದಿನ ರಾಷ್ಟ್ರಕೂಟ ಸಮ್ರಾಟರು ಯೋಚಿಸಿದರು. ಆಗ ಶ್ರೀ ವಲ್ಲಭ ಎಂದರೆ ಮುಮ್ಮಡಿ ಕೃಷ್ಣನು ದುಷ್ಟರಾದ ದಂತಿಗ ಅಪ್ಪುಗರನ್ನು ಕೊಂದು, ರಾಜಮಲ್ಲನೆಂಬ ವಿಷವೃಕ್ಷವನ್ನು ಕಿತ್ತೊಗೆದು ಭೂತಾರ್ಯನೆಂಬ ಪುಣ್ಯ ತರುವನ್ನು ನೆಟ್ಟು ಗಂಗವಾಡಿಯನ್ನು ಪುಷ್ಪವಾಟಿಯಂತೆ ಸನಾಥವನ್ನಾಗಿ ಮಾಡಿದನು. ಯಾವ ಮುಮ್ಮಡಿ ಕೃಷ್ಣನ ಪ್ರತಾಪವು ದ್ವೇಷಿಯಾದ ಗಂಗ ಕುಲದ ರಾಚಮಲ್ಲನೆಂಬ ಅಬ್ಧಿಯನ್ನು ಶೋಷಣಗೊಳಿಸಿತೋ ಅದು ವಿಖ್ಯಾತನಾದ ಅಣ್ಣಿಗ ಪಲ್ಲವನಿಗೆ ವಿಪತ್ತಿಯನ್ನುಂಟು ಮಾಡಿತು; ಅಂದರೆ ರಾಜಮಲ್ಲನೆಂಬ ವಿಷವೃಕ್ಷವೂ, ಅದನ್ನೇ ಆಶ್ರಯಿಸಿ ಹಬ್ಬಿದ್ದ ಅಣ್ಣಿಗನೆಂಬ ಅಮೃತಲತೆಯೂ ಒಟ್ಟಿಗೆ ಮುಮ್ಮಡಿ ಕೃಷ್ಣನಿಂದ ನಾಶಗೊಳಿಸಲ್ಪಟ್ಟವು. ಇದಕ್ಕೆ ವಿಸ್ಮಯವೇಕೆ! ಈ ದಿವೋಳಿ ತಾಮ್ರಶಾಸನದ ಕಾಲ ಶಕ ಸಂವತ್ಸರ ೮೬೨ನೆಯ (ಕ್ರಿ. ಶ. ೯೪೦) ಶಾರ್ವರೀ ಸಂವತ್ಸರದ ವೈಶಾಖ ಬಹುಳ ಪಂಚಮಿ. ಆದ್ದರಿಂದ ರಾಚಮಲ್ಲ ಮತ್ತು ಅಣ್ಣಿಗ ಈ ಇಬ್ಬರೂ ಇದಕ್ಕೆ ಕೆಲವು ವರ್ಷಗಳ ಮುಂಚೆಯೇ ವಿಪತ್ತನ್ನು ಹೊಂದಿದರು ಅಂದರೆ ಕೊಲ್ಲಲ್ಪಟ್ಟರು ಎಂದು ಸ್ವಯಂವ್ಯಕ್ತವಾಗುವುದು.

**ಖಟ್ವಾಂಗನೆಂಬರಸು:** "ಸ್ವಾಹಾಂಗನಾನಾಥ ಸಂಪೂರ್ಣ ಮನೋರಥನಾಗಿ **ಖಟ್ವಾಂಗನೆಂಬರಸನ** ಯಜ್ಞದೊಳಾತನು ತಂದ ಘೃತ ಸಮುದ್ರಮಂ ಕುಡಿದೊಡಾದ ರೋಗಮಿಂದು ಪೋದುದೆಂದು ನೀರೋಗನಾಗಿ ಮಹಾನುರಾಗಂಬೆರಸು ಪರಸಿ ಪೋದನು" ಎಂದು ಶಾ. ಶ. ೮೬೩ರಲ್ಲಿ (ಕ್ರಿ. ಶ. ೯೪೧ರಲ್ಲಿ) ರಚಿತವಾದ ಪಂಪ ಮಹಾಕವಿಯು ವಿಕ್ರಮಾರ್ಜುನ ವಿಜಯದಲ್ಲಿ ಹೇಳಿದೆ. (ಪಂಪ ಭಾರತ ೫ನೆಯ ಅಶ್ವಾಸ ೧೦೨ನೆಯ ಪದ್ಯದನಂತರ ವಚನ). ಮೂಲ ವ್ಯಾಸಭಾರತದಲ್ಲಿ ಖಟ್ವಾಂಗನೆಂಬರಸು ಎಂದು ಹೇಳಿಲ್ಲ. "ಅನುಗಾಲವೂ ಯಜ್ಞಮಾಡುವುದರಲ್ಲಿಯೇ ಆಸಕ್ತನಾಗಿದ್ದ **ಶ್ವೇತಕೀ** ಎಂಬ ಅರಸು ಮಾಡಿದ ಯಜ್ಞಗಳಲ್ಲಿ ಅಗ್ನಿದೇವನಿಗೆ ಅಜೀರ್ಣವಾದದ್ದು" ಆದಿಪರ್ವದಲ್ಲಿ ಉಕ್ತವಾಗಿದೆ. ಹೀಗೆ ಪಾತ್ರಗಳ ಹೆಸರುಗಳ ವ್ಯತ್ಯಾಸವಿದೆ (ಪಂಪ ಭಾರತದ ಉಪೋದ್ಘಾತ ಪುಟ ೫೧) ಹಾಗಾದರೆ ಖಟ್ವಾಂಗನೆಂಬರಸು ಯಾರು? ಪ್ರಭುರಾಮಮಂಗಲದ ತಾಮ್ರಶಾಸನದಲ್ಲಿ ನೊಳಂಬ ಪಲ್ಲವರು "ಕಟ್ವಾಂಗ ಧ್ವಜರು" ಎಂದಿದೆ. ಖಟ್ವಾಂಗಧ್ವಜ ಎಂಬುವ ಸಂಸ್ಕೃತಪದದ ಕನ್ನಡರೂಪವೇ ಕಟ್ವಾಂಗಧ್ವಜ. ಖಟ್ವಾಂಗ ಎಂದರೆ ಶೈವ

---

೨೩ ದಿವೋಳಿ ತಾಮ್ರ ಶಾಸನ, ಶ್ರೀ ಭಂಡಾರಕರ್ ಅವರ ದಕ್ಷಿಣ ಪ್ರಾಚೀನ ಇತಿಹಾಸ (Early History of the Deccan) Page ೩೧೫.

೨೪ ಚಿತ್ರದುರ್ಗ ೭೬,

ಯತಿಗಳು ಹಿಡಿಯುವ ತಲೆಬುರುಡೆಯನ್ನು ಸಿಕ್ಕಿಸಿದ ದಂಡ. ಶಿವನಿಗೆ ಖಟ್ವಾಂಗಧರ ಎಂದು ಹೆಸರು. ಕಂಚಿಯ ಪಲ್ಲವ ನಂದಿಪೋತವರ್ಮನ ಒಂದು ಶಾಸನದಲ್ಲಿ ಅವನಿಗೆ 'ಖಟ್ವಾಂಗಧ್ವಜ ಪ್ರಭೂತ ಪ್ರಖ್ಯಾತ' ಎಂದಿದೆ (New Mysore Gazetteer Vol. II P. ೫೬೦.) ಪ್ರಕೃತ ಖಟ್ವಾಂಗನೆಂಬರಸು ಎಂದರೆ ನೊಳಂಬ ಪಲ್ಲವರ ರಾಜ ಎಂದು ವ್ಯಕ್ತವಾಗುವುದು. ರಾಷ್ಟ್ರಕೂಟ ಚಕ್ರವರ್ತಿ ನಾಲ್ಕನೇ ಗೋವಿಂದನೆಂಬ ಗೊಜ್ಜಿಗನು ಕೌರವರಂತೆ ದುರುಳನಾಗಲು, ಅವನ ಹಿಂಸೆ ತಡೆಯಲಾರದೆ ಸತ್ಪ್ರಜೆಗಳು ಅವನನ್ನು ರಾಜಪದವಿಯಿಂದ ಚ್ಯುತಿಮಾಡಿಸಿ, ಧರ್ಮರಾಯನಂತೆ ಪ್ರಜಾರಂಜಕನಾದ ಮತ್ತು ಗೋವಿಂದನ ಚಿಕ್ಕಪ್ಪನಾದ ಮುಮ್ಮಡಿ ಅಮೋಘವರ್ಷನನ್ನು ಸಿಂಹಾಸನವನ್ನಾಕ್ರಮಿಸುವಂತೆ ಪ್ರಾರ್ಥಿಸಿದರು. ಈ ದಾಯಾದಿಗಳಿಗೆ ನಡೆದ ಯುದ್ಧವೇ "ಕನ್ನಡ ನಾಡಿನ ಭಾರತ ಸಂಗ್ರಾಮ" ಎಂದು ಪ್ರಸಿದ್ಧವಾಯಿತು. ಗೊಜ್ಜಿಗನ ಪಕ್ಷಕ್ಕೆ ದಂತಿಗ, ಒಪ್ಪುಗ, ಗಂಗರ ಮುಮ್ಮಡಿ ರಾಚಮಲ್ಲ, ನೊಳಂಬಪಲ್ಲವ ಅಯ್ಯಪ್ಪ ಮತ್ತು ಈತನ ಮಗ ಅಣ್ಣಿಗ ಮೊದಲಾದವರು ಸೇರಿದರು. ಭದ್ರದೇವ ಅಮೋಘವರ್ಷನ ಪಕ್ಷಕ್ಕೆ ಅವನ ಮಗ ಮುಮ್ಮಡಿ ಕೃಷ್ಣನೆಂಬ ಕನ್ನಡ, ವಿಕ್ರಮಾರ್ಜುನನೆಂಬ ಅರಿಕೇಸರಿ, ರಾಷ್ಟ್ರಕೂಟ ಶಾಖೆಯ ಗಭೀನ್ದ್ರನ ಮಗ ಇರಿವಕನ್ನೂರ, ಗಂಗಭೂತಗ ಮೊದಲಾದವರು ಸೇರಿದರು. ಯುದ್ಧದಲ್ಲಿ ಮುಮ್ಮಡಿ ಅಮೋಘವರ್ಷನ ಪಕ್ಷಕ್ಕೆ ಜಯ ಲಭಿಸಿ, ಅಮೋಘವರ್ಷನೇ ಸಿಂಹಾಸನವನ್ನೇರಿದನು. ಈ ಸಂಗ್ರಾಮದಲ್ಲಿ ಭಾಗವಹಿಸಿದ ಎದುರಾಳಿಗಳಾದ ನೊಳಂಬ ಪಲ್ಲವ ಐಯ್ಯಪ್ಪ ಅಥವ ಅವನ ಮಗ ಅಣ್ಣಿಗನನ್ನೇ ಅವನ ಧ್ವಜ ಸಂಕೇತದಿಂದ ಖಟ್ವಾಂಗನೆಂಬ ಅರಸು ಎಂದು ಪಂಪ ಮಹಾಕವಿಯು ಹೇಳಿರುವನೆಂದು ಸ್ಪಷ್ಟವಾಗುವುದು. ದಿವೋಳಿ ತಾಮ್ರಶಾಸನದಲ್ಲಿ ಖಾಂಡವವನ ಎಂಬುದಕ್ಕೆ ಸಮನಾಗಿ ಗಂಗಪಾಟೀ ಎಂದೂ ಅಲ್ಲಿಯ ವೃಕ್ಷಗಳಿಗೆ ವಿಷದ್ರುಮ, ಪುಣ್ಯತರು ಎಂದು ಮುಂತಾಗಿ ಹೇಳಿರುವುದು ಸಮಂಜಸವಾಗಿದೆ.

ಶಕ ಸಂವತ್ಸರ ೮೫೯ನೆಯ ಹೇವಳಂಬಿ ಸಂವತ್ಸರದ ಬಾದ್ರಪದ ಬಹುಳ ಅಮಾವಾಸ್ಯೆ ಬೃಹಸ್ಪತಿವಾರ (೭-೯-೯೩೭ ಕ್ರಿ. ಶ.) ದ ಇಸಾಮುದ್ರದ ಶಿಲಾಶಾಸನದಲ್ಲಿ[೨೪] ಇರಿವ ಕನ್ನರನು ಗಂಗ ಪೆರ್ಮಾಳಿಯನ್ನು ಕೊಂದನು ಎಂದು ಹೇಳಿದೆಯಷ್ಟೆ ಈ ಗಂಗ ಪೆರ್ಮಾಳಿಯು ಗಂಗವಾಡಿಯ ವಿಷವೃಕ್ಷವಾದ ರಾಚಮಲ್ಲ ಎಂಬುದರಲ್ಲಿ ಸಂದೇಹವಿಲ್ಲ. ರಾಚಮಲ್ಲ ಅಣ್ಣಿಗ ಈ ಈರ್ವರೂ ಒಟ್ಟಿಗೆ ವಿಪತ್ತು ಹೊಂದಿದರು. ಅಂದರೆ ಕೊಲ್ಲಲ್ಪಟ್ಟರು. ಆದ್ದರಿಂದ ಅರಕೆಲ್ಲ ಮತ್ತು ಅಣ್ಣಿಗರ ಸಿರಿವೂರು ಕಾಳಗವು ಕ್ರಿ. ಶ. ೭-೯-೯೩೭ಕ್ಕೆ ಮುಂಚೆಯೇ ಸಂಭವಿಸಿರುವುದರಲ್ಲಿ ಸಂದೇಹವೇನಿದೆ ?

## ೩ ಹೊಯ್ಸಳನ ಪಟ್ಟಾಭಿಷೇಕ

ಶಾಲಿವಾಹನ ಶಕದೊಳೆಂಟುನೂರಿಂದಲಾ ।
ಮೇಲಣ ವಿಳಂಬಿ ವತ್ಸರ ಚೈತ್ರ ಶುದ್ಧದೊಳ್ ।
ಮೇಲಾದ ದಶಮಿಯಾ ಗುರುವಾರದುದಯದೊಳ್ ಗಳಿಗೆ ಹನ್ನೆರಡಾಗಲಾ ॥
ವೇಳೆಯೊಳ್ ಹೊಯ್ಸಳಗೆ ಪಟ್ಟವುಂ ಕಟ್ಟಲವ

ನಾಳುತಿರ್ಪೆಳೆಯೆ ಹೊಯ್ಸಳ ರಾಜ್ಯವೆನಿಸುವುದು।
ಲೀಲೆಯಿಂದನಾದಿಯಾದ ನವಬಲ್ಲಾಳರೊಲಿಳ್ವರಾ ಧರೆಯನು ॥ ೨೫

ಎಂದು ಚನ್ನಬಸವ ಪುರಾಣದಲ್ಲಿ ಹೇಳಿದೆ. ಶಕ ೮೦೦ ಮತ್ತು ೮೬೦ ಸಂವತ್ಸರಗಳಲ್ಲಿ ವಿಳಂಬಿ ಸಂವತ್ಸರವು ಪ್ರವರ್ತಿಸುತ್ತಿತ್ತು. ಎಂಟು ನೂರುರಿಂದಾಮೇಲಣ ಎಂದಿರುವುದರಿಂದ ಈ ಪದ್ಯದ ವಿಳಂಬಿಯು ಶಕ ೭೬೦ ಎಂದು ಸ್ಪಷ್ಟವಾಗುವುದು.

ಶಕ ೮೬೦ನೆಯ ವಿಳಂಬಿ ಚೈತ್ರ ಶು. ೧೦ ಬುಧವಾರವಾಗುತ್ತದೆ. ನಕ್ಷತ್ರ ಆಶ್ಲೇಷ ಅಥವಾ ಮಖ. ೧೨ ಗಳಿಗೆಯನ್ನು ಉದಯದಿಂದ ಲೆಕ್ಕಮಾಡಿದ್ದರೆ ಅಂದು ಗುರುವಾರ ಬರುತ್ತದೆ. ಇದಕ್ಕೆ ಸರಿಯಾದ ಇಸವಿ ೧೫-೩-೯೩೮ನೇ ಗುರುವಾರ. ೨೬ ಆಗಿನ ಗ್ರಹಸ್ಥಿತಿ :—

| | | | |
|---|---|---|---|
| ಶು | ರ ಗು | ಬು ಲ | |
| ಶ | | | ಚ |
| ಕು | | | |
| | | | |

ದೇವಚಂದ್ರನು ತನ್ನ ರಾಜಾವಳಿ ಕಥೆಯಲ್ಲಿ ಇದೇ ಕಾಲವನ್ನೇ ಹೇಳಿದ್ದಾನೆ:—

ಶಕ ಸಂದೆಂಟು ನೂರರ ವಿಳಂಬಿ ಸಂವತ್ಸರ ಶುದ್ಧ ಮಾ।
ಪ್ರಕಟತ ಮಪ್ಪುದಾ ದಶಮಿ ಬೃಹಸ್ಪತಿವಾರ ಪುಷ್ಯತಾರೆ ಕಾ।
ತುಕ ಧೃತಿಯೋಗ ಗಿರಿಜಾ ಕರಣಂ ಲಗ್ನ ತಾ ಬರುವಾಗೆ ಸಂಪ।
ದ ಕಳಂಕ ಮುನಿಪಂ ಹೊಯ್ಸಳಂಗೆ ನೆರೆ ಕೊಟ್ಟ ಮಂತ್ರಸಿದ್ಧಿಯಂ ॥ ೨೭

ಇಲ್ಲಿ ಶಕಸಂದ ಎಂಟು ನೂರರ ವಿಳಂಬಿ ಎಂದರೆ ಶಕ ೮೦೦ರಲ್ಲಿ ಬಂದ ವಿಳಂಬಿಯ ಅನಂತರ ವಿಳಂಬಿ ಎಂದು ಅರ್ಥಮಾಡಬೇಕಾಗುವುದು. ಹಾಗೆ ಆದರೆ ದೇವಚಂದ್ರ ಮತ್ತು ವಿರೂಪಾಕ್ಷ ಪಂಡಿತಾರಾಧ್ಯರು ಹೇಳಿರುವ ಎರಡು ಕಾಲವೂ ಒಂದೇ ಆಗುವುದು. ವಿರುಪಾಕ್ಷ ಪಂಡಿತಾರಾಧ್ಯರು ವಿಜಯನಗರದರಸರ ಕಾಲದಲ್ಲಿದ್ದವರು ದೇವಚಂದ್ರನು ಮೈಸೂರು ಒಡೆಯರ ಕಾಲದವನು ಈರ್ವರಿಗೂ ಎರಡು ಶತಮಾನಗಳ ಕಾಲ ಅಂತರವಿದೆ. ಇವರ ಮತಗ್ರಂಥಗಳೂ ಬೇರೆಬೇರೆ. ಒಬ್ಬರ ಆಧಾರ ಗ್ರಂಥಗಳು ವೀರಶೈವ ಸಂಪ್ರ

೨೫ ಚನ್ನಬಸವ ಪುರಾಣ ಸಂಧಿ ೬೨ ಪದ್ಯ ೫೧.

೨೬ ಡಾ। ಸೊಂಡೆಕೊಪ್ಪದ ಶ್ರೀಕಂಠಶಾಸ್ತ್ರಿಗಳು ನನಗೆ ೭-೨-೧೯೫೫ರಂದು ಬರೆದಿರುವ ಕಾಗದದಿಂದ ಕೃತಜ್ಞತಾಪೂರ್ವಕವಾಗಿ ಈ ಗ್ರಹಕುಂಡಲಿಯನ್ನು ಉದ್ಧರಿಸಿದ್ದೇನೆ. ಚನ್ನಬಸವ ಪುರಾಣದ ಈ ತೇದಿಯು ಅಗ್ರಾಹ್ಯವೆಂಬುದು ಅವರ ಮತ. ಇದೇ ತೇದಿ ಸತ್ಯಾಂಶಕ್ಕೆ ಸಮೀಪವಾದುದು ಎಂದು ನನ್ನ ಅಭಿಪ್ರಾಯ.

೨೭ MAR ೧೯೨೫ Pages ೧೨ and ೧೩.

ಡಾಯದವು, ಮತ್ತೊಬ್ಬರದು ಜೈನಗ್ರಂಥಗಳು. ಹೀಗಿದ್ದರೂ ಈರ್ವರೂ ಒಂದೇ ಕಾಲವನ್ನು ಸೂಚಿಸಿರುವುದನ್ನು ಗಮನಿಸಿದರೆ ಈರ್ವರಿಗೂ ಚಾರಿತ್ರಿಕ ಆಧಾರಗ್ರಂಥವೊಂದು ಲಭ್ಯವಾಗಿರಬಹುದೆಂದು ತೋರುತ್ತದೆ.

ವೀರಶೈವರ ಕಾಲಜ್ಞಾನವಚನಗಳಲ್ಲಿ ಸುತರಾಂ ವಿಶ್ವಾಸಾನರ್ಹವಾದ ಇಂತಹ ತಾರೀಖುಗಳು ಹೇರಳವಾಗಿವೆ. ಆದ್ದರಿಂದ ಪಟ್ಟಾಭಿಷೇಕದ ಈ ಮುಹೂರ್ತದ ವಿಷಯದಲ್ಲಿ ಹೆಚ್ಚು ನಂಬಿಗೆ ಇಡಲಾಗದು ಎಂದು ಅಭಿಪ್ರಾಯಪಡಲಾಗಿದೆ. ಆದರೂ ಮೇಲೆ ಉದಹರಿಸಿರುವ ಮುಹೂರ್ತವು ಇತಿಹಾಸ ಸಂಗತಿಗಳಿಗೆ ಊನತಂದಿಲ್ಲ. ಇತಿಹಾಸಕ್ಕೆ ಅನುಸಾರವಾಗಿಯೇ ಇದೆ. ಆದ್ದರಿಂದ ಈ ಮೂಹೂರ್ತವು ನಂಬಿಕೆಗೆ ಅರ್ಹವಾಗಿ ತೋರುವುದು.

ಸಳನು ಒಬ್ಬ ಸಣ್ಣ ಸಾಮಂತ. ಅವನಿಗೆ ರಾಜ್ಯಾಭಿಷೇಕವೇ ? ಎಂದು ಅಭಿಪ್ರಾಯಪಡಲು ಅವಕಾಶವಿದೆ. ಕ್ರಿ. ಶ. ೯೩೮ರ ಸಮಯದಲ್ಲಿ ಬದ್ದೆಗ ಅಮೋಘವರ್ಷನು ಚಕ್ರವರ್ತಿಯಾಗಿದ್ದನು. ದಕ್ಷಿಣದಲ್ಲಿ ಭೂತಗೇಂದ್ರನು ದರ್ಪದಿಂದ ರಾಜ್ಯವಾಳುತ್ತಿದ್ದನು. ಹೀಗಿರುವಲ್ಲಿ ಆಗತಾನೇ ರಾಜ್ಯವನ್ನು ಗಳಿಸಿದ ಸಳನಿಗೆ ಪಟ್ಟಾಭಿಷೇಕವಾದುದು ಅಸಂಭವ ಎಂದು ಅಭಿಪ್ರಾಯಪಡಲಾಗಿದೆ. ಚಕ್ರವರ್ತಿಗಳಂತೆಯೇ ಅವರ ಅಧೀನರಾದ ಮಹಾಮಂಡಳೇಶ್ವರರೂ, ಮಹಾಸಾಮಂತರೂ ಮೂರ್ಧನ್ಯ ರಾಜರಾಗಲು ಭಾರತದ ಇತಿಹಾಸದಲ್ಲಿ ಅನೇಕ ಉದಾಹರಣೆಗಳಿವೆ. ಇದೇ ಕಾಲದಲ್ಲಿಯೇ ಅರಿಕೇಸರಿಯು ರಾಜ್ಯಾಭಿಷಿಕ್ತನಾಗಲಿಲ್ಲವೇ ? ಭೂತಗೇಂದ್ರನು ರಾಜನಾಗಿ ಪ್ರತಿಷ್ಠಾಪಿಸಲ್ಪಡಲಿಲ್ಲವೇ ? ಮತಿಪರೊಳು ಧೀರನಾದ ಸಳನು ಜೈನಗುರುಗಳ ಸಹಾಯದಿಂದ ರಾಜ್ಯಾಭಿಷಿಕ್ತನಾಗಿರುವುದು ಅಸಂಭವವೇನೂ ಆಗಲಾರದು. ಈಚಿನ ಕವಿಗಳು ಈ ಶುಭಮುಹೂರ್ತವನ್ನೇ ಪಟ್ಟಾಭಿಷೇಕ ಎಂದು ಉತ್ಪ್ರೇಕ್ಷಿಸಿರಬಹುದು. ಶಾಲಿವಾಹನ ಶಕ ೮೬೦ನೆಯ ವಿಳಂಬಿ ಸಂವತ್ಸರದ ಚೈತ್ರ ಶುದ್ಧ ದಶಮಿ ಗುರುವಾರವು (ಕ್ರಿ. ಶ. ೧೫-೩-೯೩೮) ಹೊಯ್ಸಳರಾಜ್ಯ ಸ್ಥಾಪಕ ಸಳನ ಜೀವಮಾನದಲ್ಲಿ ಒಂದು ಮುಖ್ಯವಾದ ದಿವಸ ಎಂಬುದರಲ್ಲಿ ಸಂದೇಹವಿಲ್ಲ.

## ಪೊಯ್ಸಳ ಮಾರುಗ

ಮೇಲೆ ಹೇಳಿರುವ ವಿಷಯಗಳನ್ನು ವಿಮರ್ಶಿಸುವುದರಿಂದ (೧) ಪೊಯ್ಸಳ ಮಾರುಗನು ಪಲ್ಲವ ಅಣ್ಣಿಗನೊಡನೆ ಸಿರೂರು ಕಾಳಗದಲ್ಲಿ ಹೋರಾಡಿದನು. (೨) ಅಣ್ಣಿಗನು ಗಂಗ ರಾಚಮಲ್ಲನೊಡನೆ ಹೋರಾಡಿ, ಸೋತುಹೋಗಿ ಅವನ ಮಿತ್ರನಾದನು. (೩) ಅಣ್ಣಿಗನೂ ರಾಚಮಲ್ಲನೂ ಮುಮ್ಮಡಿ ಕೃಷ್ಣನ ಕೋಪಾಗ್ನಿಗೆ ತುತ್ತಾದರು. (೪) ಇವರಿಬ್ಬರೂ ಇಸಾಮುದ್ರದ ಶಿಲಾಶಾಸನ ಕಾಲಕ್ಕಿಂತ ಮುಂಚೆಯೇ (೭-೯-೯೩೭) ವಿಪತ್ತನ್ನು ಹೊಂದಿ ಕೊಲ್ಲಲ್ಪಟ್ಟರು. (೫) ಸಿರೂರು ಕಾಳಗವು ಇದಕ್ಕೆ ಮುಂಚೆಯೇ ನಡೆಯಿತು. (೬) ಹೊಯ್ಸಳನ ಪಟ್ಟವು ಶಕ ೮೬೦ರಲ್ಲಿ (೧೫-೩-೯೩೮) ನಡೆಯಿತು. ಎಂಬ ಅನುಮಾನವಿಲ್ಲದ ಈ ನಂಬಿಕೆಗಳು ಮೂಡುವುವು.

ವಿನಿಯಾದಿತ್ಯ ರಾಜನಿಗಿಂತ ಮುಂಚೆ ಪೊಯ್ಸಳ ಎಂಬ ಶಬ್ದವು ಉಪಯೋಗವಾದ ಯಾದ ಶಾಸನವೂ ದೊರೆತಿರಲಿಲ್ಲ. ಕ್ರಿ. ಶ. ೧೦೦೬ನೆ ಸಂವತ್ಸರದ ಕಲಿಯೂರು ಶಾಸನವೊಂದು ಮಾತ್ರ ಅಪವಾದವಾಗಿತ್ತು. ಈ ಮೊರಲೆಯ ಪೊಯ್ಸಳ ಮಾರುಗನ

ಹೆಸರಿರುವ ಶಾಸನವು ಇದುವರೆಗೂ ಗೊತ್ತಾಗದೇ ಇರುವ ಆದಿ ಹೊಯ್ಸಳರ ಒಂದು ಶಾಸನವಾಗಿರಬೇಕು ಎಂದು ದಿವಂಗತ ಶ್ರೀ ಎಂ. ಹೆಚ್. ಕೃಷ್ಣರು ಅಭಿಪ್ರಾಯ ಪಟ್ಟಿರುವರು. ಹೊಯ್ಸಳ ರಾಜ್ಯಸ್ಥಾಪಕನಾದ ಪೊಯ್ಸಳನ ರಾಜ್ಯಾಭಿಷೇಕ ಕಾಲವು ಮೇಲೆ ಹೇಳಿರುವಂತೆ ವಿಳಂಬಿ ಸಂವತ್ಸರದ ಚೈತ್ರ ಶುದ್ಧ ದಶಮಿ ಗುರುವಾರ (ಕ್ರಿ. ಶ. ೧೫–೩–೯೩೮) ಎಂದಿರುವುದರಿಂದ ಅದಕ್ಕೆ ಒಂದೆರಡು ವರ್ಷಗಳ ಕಾಲ ಮುಂಚೆ ಇದ್ದ ಪೊಯ್ಸಳ ಮಾರುಗನೇ ರಾಜ್ಯಸ್ಥಾಪಕನೆಂಬ ಬಲವಾದ ಊಹೆಗೆ ಅವಕಾಶವಿದೆ. ಈ ನನ್ನ ಊಹೆಯನ್ನು ನಂಬುವುದಾದರೆ ವಿಷ್ಣುವರ್ಧನನವರೆಗೆ ವಂಶವೃಕ್ಷವು ಕೆಳಗಿನಂತೆ ಸೃಜಿಸಬಹುದು.

### ಹೊಯ್ಸಳರ ಹೊಸ ವಂಶವೃಕ್ಷ




### ೪. ಸಳನ ಜೀವನ ಚರಿತ್ರೆ

**ಶಶಾಕಪುರ ನಿರ್ಮಾಣ :** ಹೊಯ್ಸಳ ವಂಶಾನ್ವಯ ಮೂಲಪುರುಷ ಸಳ. ಅವನು ಕನ್ನಡನಾಡಿನ ವೀರ. ಒಮ್ಮೆ ಸಹ್ಯಾಚಲದ ಸಾನುಸ್ಥಾನದಲ್ಲಿ ಬೇಟೆಯಾಡುತ್ತಿದ್ದನು. ಇವನ ಕಣ್ಣೆದುರಿಗೇ ಒಂದು ಚೋದ್ಯವು ನಡೆಯಿತು. ಒಂದು ಮೊಲವು ತನ್ನನ್ನು ಹಿಡಿದು ಕಬಳಿಸಲು ಬೆನ್ನಟ್ಟಿ ಬಂದ ಹುಲಿಯನ್ನು ಹೆದರಿಸಿ ಹಿಂದಕ್ಕಟ್ಟಿತು. ಈ ಚೋದ್ಯವನ್ನು ಕಂಡ ಸಳನು ಆಶ್ಚರ್ಯಚಕಿತನಾದನು. ಅದು ಗಂಡು ಜಾಗವಿರಬೇಕು ; ಇಲ್ಲವಾದರೆ ನಾಯಿ–ನರಿಗಳಿಗೆ ಅಂಜುವ ಮೊಲಕ್ಕೆ ಮೃಗರಾಜನಾದ ಹುಲಿಯು ಅಂಜಿ ಹಿಂಜರಿದು ಹಿಮ್ಮೆಟ್ಟಲು ಸಾಧ್ಯವೇ ! ಎಂದು ಮನಗಂಡು ಅಲ್ಲಿಗೆ ತನ್ನ ಬಂಧು ಬಳಗದವರನ್ನೂ ಆಪ್ತೇಷ್ಟರನ್ನೂ ಆಹ್ವಾನಿಸಿ, ಹುಗ್ಗಿ ಹೊಯಿದು ಊರುಕಟ್ಟಿ ನೆಲೆಸಿದನು. ಮೊಲವು ಧೀರತನ ತೋರಿದ ವೀರಕ್ಷೇತ್ರದಲ್ಲಿ ನಿರ್ಮಿತವಾದ ಊರಾದ್ದರಿಂದ ಅದಕ್ಕೆ ಸಂಸ್ಕೃತದಲ್ಲಿ ಶಶಾಕಪುರವೆಂದೂ ಕನ್ನಡದಲ್ಲಿ ಸೋಸವೂರೆಂದೂ ಹೆಸರು ರೂಢವಾಯಿತು.

ಸಳ ಮತ್ತು ಅವನ ಅನುಬಂಧಿಗಳು ಜೈನಮತೀಯರು. ಅವರ ಪೂರ್ವಿಕರು ಶ್ರೀ ಕೃಷ್ಣನ ರಾಜಧಾನಿಯಾಗಿದ್ದ ದ್ವಾರಕಾನಗರ ವಾಸಿಗಳಾಗಿದ್ದರಂತೆ. ಕಾರಣಾಂತರ ಗಳಿಂದ ಕೆಲವು ಯಾದವ ವಕ್ಕಲುಗಳು ದ್ವಾರಾವತಿಯನ್ನು ತೊರೆದು ವಲಸೆಹೊರಟು ಕನ್ನಡ ನಾಡಿಗೆ ಒಂದು ತಮ್ಮ ದನಕರುಗಳಿಗೆ ಹುಲ್ಲೂ, ನೀರೂ, ನೆರಳೂ ಸಮೃದ್ಧಿಯಾದ ಮಲೆನಾಡು ಪ್ರಾಂತದ ಸಹ್ಯಾದ್ರಿಯ ಅಂಚಿನಲ್ಲಿ ನೆಲೆಸಿದ್ದರು.

ಕಾಲಕ್ರಮದಲ್ಲಿ ಸಳನ ಅಜ್ಜನೂ, ಯೋಧನೂ ಆದ ಅರೆಕೆಲ್ಲನು ಸೇನಾಪತಿ ಪದವಿಯನ್ನು ಪಡೆದಂತೆ ಕಾಣುವುದು. ಇವನ ಮಗನೂ ಯೋಧ. ಅಣ್ಣಿಗನ ತಂದೆ ನನ್ನಿಗನಿಗೆ ಮನ್ಮಥಪ್ರಾಯನಾಗಿ ನಣ್ಣಿಕಂದರ್ಪ ಎಂಬ ಬಿರುದನ್ನು ಧರಿಸಿದನು. ಬಹುಶಃ ಇವನ ಹೆಸರೋ, ಬಿರುದೋ ಶ್ರೀ ಸಾಮನ್ತರಾಮ. ದ್ವಾರಕೆಯಿಂದ ವಲಸೆ ಬಂದ ಸಳನ ಪೂರ್ವಿಕರು ವೊರಲೇ ಮತ್ತು ಸುತ್ತುಮುತ್ತ ಗ್ರಾಮಗಳಲ್ಲಿ ನೆಲಸಿದಂತೆ ತೋರುವುದು.

ಸಳನು ತನ್ನ ಸಂಬಂಧಿಗಳಾದ ಕೆಲವು ವಕ್ಕಲುಗಳನ್ನು ಅಲ್ಲಿಂದ ಕರತಂದು ಮೇಲೆ ಉಕ್ತವಾಗಿರುವಂತೆ ಸೋಸವೂರನ್ನು ಕಟ್ಟಿ ನೆಲೆಸಿದನು. ಆ ಊರ ಬಳಿ ಬೆಳೆ ಹುಲುಸಾಗಿ ಬೆಳೆದು ದನಕರುಗಳು ಅಭಿವೃದ್ಧಿಗೊಂಡು ಸಂಪತ್ಸಮೃದ್ಧಿಯಾದ ಗ್ರಾಮ ವಾಗಿ ರಂಜಿಸಿತು. ಮೂರುದಾರಿ ಸೇರಿದ ಬಳಿ ನಿರ್ಮಿಸಿದ ಆ ಊರಿಗೆ ಶೆಟ್ಟರೂ ವರ್ತಕರೂ ಬಂದು ಅಂಗಡಿಗಳನ್ನಿಟ್ಟುಕೊಂಡು ನೆಲೆಸಿದರು. ಅಂಗಡಿಗಳು ಅಪರೂಪವಾದ ಮಲೆನಾಡಿನಲ್ಲಿ ಅಂಗಡಿಗಳ ಸೋಸವೂರಿಗೆ ಅಂಗಡಿ ಎಂಬ ಹೆಸರೇ ರೂಢವಾದಂತೆ ತೋರುತ್ತೆ. ಶೆಟ್ಟಿ ಇದ್ದಲ್ಲಿ ಪಟ್ಟಣ ಎಂಬ ನಾಡು ನುಡಿಯಂತೆ ಊರು ಬೆಳೆದು ಪಟ್ಟಣ ವಾಯಿತು. ವೀರನೂ ಧಾರ್ಮಿಕನೂ ಆದ ಸಳನೂ, ಶ್ರೀಮಂತರೂ ಪಟ್ಟಣ ಸ್ವಾಮಿಗಳೂ ನೆಲೆಸಿದ್ದರಿಂದ ಧರ್ಮಕಾರ್ಯಗಳು ಆರಂಭವಾದವು. ಸಳನ ಕುಲದೇವತೆಯಾದ ಪದ್ಮಾವತೀ ದೇವಿಯ ಸಂದರವಾದ ದೇವಾಲಯವು ಅತ್ಯಲ್ಪ ಕಾಲದಲ್ಲಿ ನಿರ್ಮಿತವಾಗಿ, ದೇವಾಲಯದ ಸುತ್ತಲೂ ವೃಕ್ಷರಾಶಿಗಳ ತೋಪು ಕಂಗೊಳಿಸಿತು. ಅಲ್ಲಿಗೆ ಜೈನ ಯತೀಶ್ವರರೂ, ಅವರ ಶಿಷ್ಯವರ್ಗದವರೂ ಬಂದು ನೆಲೆಸಿ, ಒಂದು ಗುರುಕುಲವೇ ಆಯಿತು. ಹೀಗೆ ತೃಣಸಮಾನವಾದ ಒಂದು ಶಶವು ಸಾಹಸ ತೋರಿದ ವೀರಕ್ಷೇತ್ರವು ಅತ್ಯಲ್ಪ ಕಾಲದಲ್ಲಿಯೇ ಸಳನ ನೆಲೆಮನೆಯಾಗಿಯೂ, ವರ್ತಕರ ಅಂಗಡಿಗಳಿಂದ ಶೋಭಿಸುವ ವ್ಯಾಪಾರ ಕೇಂದ್ರದ ಪಟ್ಟಣವಾಗಿಯೂ ಗುರುಕುಲದ ಧರ್ಮಕ್ಷೇತ್ರವಾಗಿಯೂ ಶಶಾಕಪುರ ಎಂಬ ಅಭಿಧಾನದಿಂದ ಪದ್ಮಾವತಿಯ ಪುಣ್ಯದ ಬೀಡಾಗಿ ಶೋಭಿಸಿತು.

**ಸಳನು ಪೊಯ್ಸಳನಾದನು :** ಭರತಖಂಡದಲ್ಲಿ ರಾಜಾಧಿರಾಜರನೇಕರು ತಮ್ಮ ರಾಜ್ಯವನ್ನೂ ರಾಜ್ಯಾಧಿಕಾರವನ್ನೂ ತೊರೆದು ಸನ್ಯಾಸಿಗಳಾಗಿ ಧರ್ಮಪ್ರಸಾರದಲ್ಲಿ ನಿರತ ರಾಗಿರುವ ಉದಾಹರಣೆಗಳಿವೆ. ಗಂಜಾಂ ಮತ್ತು ವಿಶಾಖಪಟ್ಟಣ ಜಿಲ್ಲೆಗಳನ್ನೊಳಗೊಂಡ ಕಳಿಂಗ ದೇಶವನ್ನಾಳುತ್ತಿದ್ದ ಗಂಗವಂಶದ ರಾಜನೋರ್ವನು ಸಂಸಾರದಲ್ಲಿ ಅಸಾರವನ್ನು ಕಂಡು ಸನ್ಯಾಸಿಯಾಗಿ ಸುದತ್ತಾಚಾರ್ಯರೆಂಬ ಯತಿಗಳಾಗಿ ಐದುನೂರು ಶಿಷ್ಯರೊಡನೆ ಗಮನಪ್ರಾಯಶ್ಚಿತ್ತಕ್ಕಾಗಿ ಕನ್ನಡನಾಡಿನಲ್ಲಿ ಸಂಚರಿಸುತಿದ್ದರು. ಆಗ ಸಂಪತ್ಸಮೃದ್ಧಿ ಯಾದ ಶಶಾಕಪುರದ ಕೀರ್ತಿಯನ್ನು ಕೇಳಿ ಆ ಊರಿನ ಸಮೀಪದಲ್ಲಿದ್ದ ತೋಪಿನಲ್ಲಿಳಿದು ಕೊಂಡು ಪದ್ಮಾವತೀದೇವಿಯ ಆರಾಧನೆಯಲ್ಲಿ ಮಗ್ನರಾಗಿದ್ದರು. ಅಸಮಾನ್ಯರಿಗೂ

ಅಸಾಧ್ಯವಾದ ತಪಶ್ಚರಣ ಮತ್ತು ವ್ರತೋಪವಾಸಗಳನ್ನು ಆಚರಿಸುತ್ತಾ ಇದ್ದ ಸದ್ಗುಣ ಶೀಲರಾದ ಆ ಮುನಿವರರ ನಾಮೋಚ್ಚಾರಣೆಯು ಮಾತ್ರದಿಂದಲೇ ಪಾಪಿಗಳೂ ಕೂಡ ಮೋಕ್ಷವನ್ನು ಪಡೆಯುತ್ತಿದ್ದರು. ಒಮ್ಮೆ ಶಿಷ್ಯರೆಲ್ಲಾ ಭಿಕ್ಷಾಟನೆಗಾಗಿ ಉಪವನದಿಂದ ಹೊರಗೆ ಹೋಗಿದ್ದರು. ಅದೇ ಸಮಯದಲ್ಲಿಯೇ ಸಳನು ದೇವತಾರಾಧನೆಗಾಗಿ ಬಂದು ಅಲ್ಲಿದ್ದ ಗುರುಗಳನ್ನು ಕಂಡು ವಂದಿಸಿ ಪಕ್ಕದಲ್ಲಿ ಕುಳಿತನು. ಆ ವೇಳೆಯಲ್ಲಿ ಹುಲಿಯೊಂದು ಆರ್ಭಟಿಸುತ್ತಾ ದೇವಾಲಯದ ಸಮೀಪಕ್ಕೆ ಬರುತ್ತಿರುವುದನ್ನು ಮುನಿವರೇಣ್ಯರು ಕಂಡು ಸಳನನ್ನುದ್ದೇಶಿಸಿ, ಒಂದು ಸೆಳೆಯನ್ನು ಕೊಟ್ಟು "ಪೊಯ್ ಸಳ" ಎಂದು ಹೇಳಿದರು. ತಕ್ಷಣವೇ ಸಳನು ಹುಲಿಯನ್ನು ಎದುರಿಸಿ ಅದು ಗೇಣುಕೂಡಾ ಮೇಲಕ್ಕೆ ಎಗರುವ ಮುನ್ನವೇ ಗೇಣಾಯುಧದಿಂದ ಕೊಂದಿಕ್ಕಿದನು. ಸಳನ ಧೀರತನವನ್ನೂ, ಚಾತುರ್ಯ ವನ್ನೂ ಕಂಡು ಮೆಚ್ಚಿದ ಆ ಮುನಿಪುಂಗವರು ಸಳನನ್ನು ಆ ನಾಡಿನ ರಾಜನಾಗುವಂತೆ ಹರಿಸಿದರು. ಅಂದಿನಿಂದ ಪೊಯ್ಸಳ ಎಂಬ ವಿಜಯನಾಮವೂ, ಹುಲಿಯೇ ವಿಜಯ ಲಾಂಛನವೂ ಆದವು. ಈ ಘಟನೆಯು ವಸಂತಕಾಲದಲ್ಲಿ ನಡೆದುದರಿಂದ ಪದ್ಮಾವತೀ ದೇವಿಗೆ ವಾಸಂತಿಕಾದೇವಿ ಎಂಬ ಅಭಿಧಾನವೂ ಆಯಿತು,

**ಪೊಯ್ಸಳನು ರಾಜನಾದನು :** ಸ್ವಸಾಮರ್ಥ್ಯವೂ, ದೈವಬಲವೂ ಇದ್ದರೂ ಪ್ರಜೆಗಳ ಒಲಿಮೆಯನ್ನು ಸಂಪಾದಿಸದೇ ಇದ್ದ ಮಾನವನು ಅಭಿವೃದ್ಧಿಯಾಗುವನೇ! ಸಳನು ಹೇಗೆ ರಾಜನಾದನೆಂಬ ವಿಷಯದಲ್ಲಿ ಒಂದು ದಂತ ಕಥೆ ಇದೆ. ಶಶಾಕಪುರದ ಅಡವಿಯಲ್ಲಿ ಅವಿತುಕೊಂಡಿದ್ದ ಹುಲಿಯೊಂದು ಜನಜಾನುವಾರುಗಳಿಗೆ ಸಂಕಟವಾಗಿತ್ತು. ಸುತ್ತಮುತ್ತಲಿನ ನಿವಾಸಿಗಳು ಪದ್ಮಾವತೀದೇವಿಯ ವಾರ್ಷಿಕೋತ್ಸವಕ್ಕೂ ಬರಲು ಭಯಪಡುತ್ತಿದ್ದರು. ಧೀರತನದಿಂದ ಹುಲಿಯನ್ನು ಕೊಂದ ಸಳನು ಪ್ರಜೆಗಳ ಮೆಚ್ಚುಗೆಗೆ ಪಾತ್ರನಾದನು. ಮುನಿಯ ಅಪ್ಪಣೆಯಂತೆ ಪ್ರಜೆಗಳು ಕುಟುಂಬ ಒಂದಕ್ಕೆ ವರ್ಷ ವರ್ಷವೂ ಒಂದು ಹಣ ಎಂದರೆ ಹದಿನಾಲ್ಕು ದುಡ್ಡನ್ನು ಸಳನಿಗೆ ಕಾಣಿಕೆಯಾಗಿ ಕೊಡಲು ಒಪ್ಪಿದರು. ಸಳನು ಈ ಹಣವನ್ನೆಲ್ಲಾ ತನ್ನ ಗುರುವಿನ ಅಡಿದಾವರೆಗಳಿಗೆ ಅರ್ಪಿಸಿದನು. ಇದು ಅಲ್ಪ ಕಾಣಿಕೆ. ಎರಡನೇ ವರ್ಷ ದ್ವಿಗುಣವಾಯಿತು. ಮೂರನೆಯ ವರ್ಷ ತ್ರಿಗುಣ ವಾಯಿತು. ನಾಲ್ಕು ಮತ್ತು ಐದನೇ ವರ್ಷಗಳಲ್ಲಿ ಇನ್ನೂ ಹೆಚ್ಚಾಗಿ ಐದು ವರ್ಷಗಳ ಅಂತ್ಯಕ್ಕೆ ಒಂದು ನಿಧಿಯಾಯಿತು. ಯತಿಪುಂಗವರು ಆ ನಿಧಿಯಿಂದ ಪಾಳಾಗಿದ್ದ ದ್ವಾರಾವತಿಯನ್ನು ಪುನರ್‌ನಿರ್ಮಾಣ ಮಾಡುವಂತೆಯೂ, ಆ ಪಾಳಿನಲ್ಲಿ ದೊರೆಯುವ ಭೂಗತವಾದ ನಿಧಿಯಿಂದ ಕೋಟೆಕೊತ್ತಲುಗಳ ರಾಜಧಾನಿಯನ್ನು ಕಟ್ಟುವಂತೆಯೂ ಅಪ್ಪಣೆ ಮಾಡಿದರು. ಅದರಂತೆ ಅಭೇದ್ಯವಾದ ಕೋಟೆಯೂ ನಿರ್ಮಾಣವಾಯಿತು. ಬಲವಾದ ಸೇನೆಯೂ ಸಿದ್ಧವಾಯಿತು.

**ರಾಜಧಾನಿ :** ಪೊಯ್ಸಳನ ಕಾಲದಲ್ಲಿಯೇ ದ್ವಾರಾವತಿ ಅಂದರೆ ದೋರಸಮುದ್ರವು ನಿರ್ಮಾಣವಾಗಲು ಆರಂಭವಾಗಿರಬಹುದು. ಆದರೆ ರಾಜಧಾನಿಯಾಗಲಿಲ್ಲ. "ಸೋಸ ವೂರೊಳನ್ನು ಪಲರುಂ ರಾಜ್ಯಂಗಯ್ಯುತಿರ್ಪಿನಂ" ಎಂದು ಒಂದು ಶಾಸನದಲ್ಲಿ ಉಕ್ತವಾ ಗಿದೆ. ಮೊದಲು ಸೋಸವೂರೇ ರಾಜಧಾನಿ. ಅನಂತರ ಬೇಲೂರು. ಪುನಃ ದೋರ ಸಮುದ್ರ ಅಂದರೆ ಇಂದಿನ ಹಳೇಬೀಡು ರಾಜಧಾನಿಯಾಯಿತು. ಇವುಗಳಲ್ಲದೆ ಕಾಲ ಕ್ರಮದಲ್ಲಿ ಬೇರೆಬೇರೆ ರಾಜಧಾನಿಗಳೂ ಆಗಿದ್ದವು.

**ರಾಜ್ಯಾಭಿಷೇಕ** : ಋಷಿಸದೃಶರಾದ ಗುರುಗಳು ಧರ್ಮಬೋಧಕರಾಗಿದ್ದುದಲ್ಲದೆ ರಾಜನಿರ್ಮಾಪಕರೂ ಆಗಿದ್ದರು. ಭಾರತದ ಇತಿಹಾಸದಲ್ಲಿ ಇದಕ್ಕೆ ಅನೇಕ ಉದಾಹರಣೆಗಳಿವೆ. ಚಾಣಕ್ಯ ಋಷಿಯಿಂದ ಛತ್ರದ ಪಾರುಪತ್ಯೇಗಾರನಾದ ಚಂದ್ರಗುಪ್ತನು ಮೌರ್ಯ ಸಾಮ್ರಾಜ್ಯಸ್ಥಾಪಕನಾದನು. ಧಡಿಗ ಮಾಧವರು ಸಿಂಹಣಂದಿ ಗುರುಗಳ ಅನುಗ್ರಹದಿಂದ ರಾಜ್ಯ ಸ್ಥಾಪಿಸಿದರು. ಗುರು ವೀರಶರ್ಮನ ಸಹಾಯದಿಂದ ಮಯೂರಶರ್ಮನು ಕದಂಬ ಸಾಮ್ರಾಜ್ಯಸ್ಥಾಪಕನಾದನು. ವಿಜಯನಗರ ಸ್ಥಾಪನೆಗೆ ಹರಿಹರ ಬುಕ್ಕರು ಶ್ರೀ ವಿದ್ಯಾರಣ್ಯರ ಅನುಗ್ರಹ ಪಡೆದರು. ಶ್ರೀ ವಿರುಪಾಕ್ಷ ಜೋಯಿಸರ ಕಾರುಣ್ಯದಿಂದ ಮತ್ತಿ ತಿಮ್ಮಣ್ಣನಾಯಕನು ಚಿತ್ರದುರ್ಗದ ಕಾಮಗೇರಿ ವಂಶಸ್ಥಾಪಕನಾದನು. ಲಂಗೋಟಿಧಾರಿಯಾಗಿ ದನ ಕಾಯುತ್ತಿದ್ದ ಭರಮಣ್ಣನಾಯಕನಿಗೆ ಶ್ರೀ ಮುರುಗಿ ಯೋಗೀಂದ್ರರ ಕಾರುಣ್ಯದಿಂದ ಚಿತ್ರದುರ್ಗದ ಒಡೆತನ ದೊರೆಯಿತು. ಹೀಗೆಯೆ, ರಾಜ್ಯಾಧಿಕಾರವು ಅಸಾರವೆಂದು ರಾಜ್ಯವನ್ನು ತೊರೆದು ಧರ್ಮಬೋಧಕರಾದ ಸುದತ್ತಾಚಾರ್ಯರೆಂಬ ಮುನಿಪುಂಗವರಿಂದ ಸಳನು ಹೊಯ್ಸಳ ಸಾಮ್ರಾಜ್ಯಸ್ಥಾಪಕನಾದನು. ಮಲೆಪರೊಳ್ಗಂಡನೂ ಧೀರನೂ ಆದ ರಾಜ; ಸಹಾಯಕರು ರಾಜ್ಯವನ್ನೇ ತೃಣವಾಗೆಣಿಸಿ ತೊರೆದು ಬಂದ ಸುದತ್ತಾಚಾರ್ಯರೆಂಬ ದಿವ್ಯ ಋಷಿ.[೨೮] ಹೀಗಿರುವಲ್ಲಿ ಮೇಲೆ ಹೇಳಿರುವಂತೆ ರಾಜ್ಯಾಭಿಷೇಕವಾದುದರಲ್ಲಿ ಅತಿಶಯೋಕ್ತಿ ಇರಲಾರದು.

**ಕಾಳಗಗಳು :** (೧) ಸಿರಿಯೂರಿನ ಕಾಳಗವನ್ನು ಮೇಲೆಯೇ ವಿವರಿಸಿದೆ. (೨) ಶಕ ೧೦೧೫ನೆಯ ಶುಕ್ಲ ಸಂವತ್ಸರದ ಆಷಾಢದಲ್ಲಿ ಪೊಯ್ಸಳ ರಾಜ್ಯದಂದು ತುರುಗಾಳಗವು ನಡೆಯಿತು. ಆಗ ಮಡಿದ ವೀರನ ಒಂದು ವೀರಗಲ್ಲು ನಾಗಮಂಗಲದ ಬಳಿಯ ಬಿಂಡಿಗನವಿಲೆಯಲ್ಲಿದೆ. ಆದರೆ ಈ ಶಾಸನದಲ್ಲಿ ಉಕ್ತವಾಗಿರುವ ಶುಕ್ಲ ಸಂವತ್ಸರವು ಶಕ ೧೦೧೫ರಲ್ಲಿ ಬಂದಿರಲಿಲ್ಲ. ವರ್ಷದ ಸಂಖ್ಯೆ ತಪ್ಪಾಗಿದೆ. ಶಕ ೮೯೧, ೯೫೧ ಮತ್ತು ೧೦೧೧ರಲ್ಲಿ ಶುಕ್ಲ ಸಂವತ್ಸರವು ನಡೆಯುತ್ತಿತ್ತು. ಶಾಸನವನ್ನು ಪ್ರಕಟಿಸಿದವರು ಶಕ ೧೦೧೧ ಅಂದರೆ ಕ್ರಿ. ಶ. ೧೦೮೯ನೆಯ ಸಂವತ್ಸರ ಎಂದೂ ಆಗ ಆಳುತ್ತಿದ್ದ ಪೊಯ್ಸಳ ವಿನಯಾದಿತ್ಯ ಎಂದೂ ಹೇಳಿದ್ದಾರೆ. ಶುಕ್ಲ ಸಂವತ್ಸರದಲ್ಲಿ ಆಳುತ್ತಿದ್ದ ರಾಜರು ಎಂದರೆ:—

| | | | | | |
|---|---|---|---|---|---|
| ಶಕ ೮೯೧ನೆಯ | ಶುಕ್ಲ ಸಂವತ್ಸರ ಆಷಾಢ | (ಕ್ರಿ. ಶ. | ಆಗಸ್ಟ್ ೯೬೯.) | ದಂದು | ಪೊಯ್ಸಳ |
| ,, ೯೫೧ | ,, | ( ,, | ೧೦೨೯) | ,, | ನೃಪಕಾಮಪೊಯ್ಸಳ |
| ,, ೧೦೧೧ | ,, | ( ,, | ೧೦೮೯) | ,, | ಇಮ್ಮಡಿವಿನಯಾದಿತ್ಯ |

ಈ ವೀರಗಲ್ಲಿನಲ್ಲಿ **ಪೊಯ್ಸಳ** ರಾಜ್ಯ ಎಂದು ಮಾತ್ರ ಉಕ್ತವಾಗಿರುವುದರಿಂದ ಶಕ ಸಂವತ್ಸರದ ಸಂಖ್ಯೆಯು ೮೯೧ ಇರಬಹುದೆಂದೂ ಆಗ ಆಳುತ್ತಿದ್ದ ರಾಜ ಪೊಯ್ಸಳ ಎಂದೂ ನಿರ್ಧರಿಸಲವಕಾಶವಿದೆ.

---

೨೮ Stories like that of Sala could easily be constructed and believed during those superstitious days, but to us they have no historic value. It is too sweeping an assertion to say that a humble *beggar* Muni could dispose of a Kingdom. ಕಳಿಂಗ ರಾಜ್ಯದ ರಾಜನಾಗಿದ್ದು ರಾಜ್ಯವನ್ನು ತೊರೆದು ಸನ್ಯಾಸಿಯಾಗಿ ಸುದತ್ತಾಚಾರ್ಯರೆಂಬ ಒರ್ವ ದಿವ್ಯ ಋಷಿಗೆ (*Beggar* Muni) ಭಿಕ್ಷುಕ ಮುನಿ ಎಂದು ಹೇಳಿರುವುದು ಅಕ್ಷಮ್ಯ ಅಪರಾಧ. The Hoysala Vamsa—by Sri William Coelho at Page 17.

**ಮಾರನೃಪತಿ:** ಸೋಸವೂರಿನಲ್ಲಿ ಹತ್ತು ಶಿಲಾಶಾಸನಗಳಿವೆ. ಇವೆಲ್ಲವೂ ಹೊಯ್ಸಳರ ಕಾಲದವು ಮತ್ತು ಜೈನರ ನಿಷಧಿ, ಬಸದಿಗಳಿಗೆ ಸಂಬಂಧಪಟ್ಟವು. ವಜ್ರಪಾಣಿ ವ್ರತೀಶ್ವರರ ನಿಷಧಿಯ ಎರಡು ಶಾಸನಗಳು ಬಹು ಮುಖ್ಯವಾದವು.[೨೯] ಹಾರಮಕ್ಕಿ ದೊಡ್ಡುಡವೆಯ ಶಾಸನದಲ್ಲಿ ಕೆಲವು ಅಕ್ಷರಗಳು ಸವೆದುಹೋಗಿವೆ. ಅರ್ಥ ಹೀಗಿದೆ:—

. . . . . . ರಾಜ್ಯಂಗೆಯ್ಯುತ್ತಿರುವಾಗ ದ್ರವಿಲಾನ್ವಯದ ಮೂಲ ಸಂಘದ ವಜ್ರಪಾಣಿ ಪಣ್ಡಿತ [ರಿದ್ದರು] ಅವರು

ಎನಿಸಿ ಸಲೆ ಗಂಗವಾಡಿಯ ।
ಮುನಿವರರಿಂ ರಾಜಮಲ್ಲ ಭೂಪಾಳಕನೀ ।
ಮನು ನೀತಿಮಾರ್ಗನಭಯಂ ।
ಜನಪತಿ ಸಮ್ಯಕ್ತ್ವ ಮಾರನೃಪತಿಯ ಗರುಗಳ್ ॥

ಇರದಾಪನ್ನಿಗಳಂಗಳಿಂ ತಳ . . . . ವ್ಯಾತ್ತ ಹೊ . . . ।
ದುರಿತಾರಣ್ಯಮನೆಯ್ದೆ ಸುಟ್ಟು ಸೊಸವೂರೊಳ್ ವಿಳ್ದಕಾಲಾಂತದೊಳ್ ॥
. . . ರೆ ಸನ್ಯಾಸ ವಿಧಾನದಿಂ ಮುಡಿಪಿ ಪೂಜ್ಯಂ ವಜ್ರಪಾಣಿಬ್ರತೀ ।
ಶ್ವರರತ್ಯುತ್ತಮ ಮುಕ್ತಿಯಂ ಪಡೆದರೇಂ ಪುಣ್ಯಕ್ಕವರ್ ನೋಂತರೋ ॥

ಅನಂತರ ರವಿಕೀರ್ತಿ ಮುನಿಯ ಅಪ್ಪಣೆಯಂತೆ ಕಲ್ನೆಲೆದೇವರು ತಮ್ಮ ಗುರು ಗುರುಗಳಿಗೆ (ವಜ್ರಪಾಣೀಶ್ವರರಿಗೆ) ನಿಷಧಿಯನ್ನು ಮಾಡಿಸಿದರು.

ಈ ಶಾಸನದಿಂದ ವಜ್ರಪಾಣಿ ವ್ರತಿಗಳು ಗಂಗವಾಡಿಯ ಮುನಿಗಳಿಗೂ, ರಾಜಮಲ್ಲ ಭೂಪಾಲಕನಿಗೂ, ಭಯವನ್ನರಿಯದ ನೀತಿಮಾರ್ಗ ಜನಪತಿಗೂ, ಸಮ್ಯಕ್ತ್ವ ಮಾರ ನೃಪತಿಗೂ ಗುರುಗಳಾಗಿದ್ದರು ಎಂದು ವ್ಯಕ್ತವಾಗುವುದು. ಈ ಮೂರು ಜನ ರಾಜರಲ್ಲಿ ರಾಜಮಲ್ಲ ಭೂಪಾಲನೂ, ನೀತಿಮಾರ್ಗನೂ ತಲಕಾಡು ಗಂಗರಾಜರು. ಮಾರಸಿಂಹನ ನಂತರ ಆಳಿದ ಇವರಿಬ್ಬರ ಕಾಲ ನಿರ್ಧಾರವಾಗಿಲ್ಲ. ಆದರೂ ಕ್ರಿ. ಶ. ೯೯೯ಕ್ಕೆ ಮೀರಿಲ್ಲ. ಸಮ್ಯಕ್ತ್ವಮಾರ ನೃಪತಿಯಾರು ?

ಶಾ. ಶ. ೮೯೬ನೆಯ ಭಾವ ಸಂವತ್ಸರದಲ್ಲಿಯೇ ಬಂಕಾಪುರದಲ್ಲಿ ಅಜಿತ ಮುನಿಗಳ ಶಿಷ್ಯನಾಗಿದ್ದು ಸಮಾಧಿಯನ್ನು ಸಾಧಿಸಿ ಅತೀತನಾದ ಮಾರಸಿಂಹನೇ ಸಮ್ಯಕ್ತ್ವ ಮಾರ ಭೂಪತಿ ಇರಬಹುದೆಂದು ಹಿಂದೆ ಒಂದು ಲೇಖನದಲ್ಲಿ ಊಹಿಸಿ ಬರೆದಿದ್ದೆನು. ಅದು ಸರಿಯಲ್ಲ; ಈಗ ತಿದ್ದಿಕೊಂಡಿರುತ್ತೇನೆ. ಶ್ರೀ ದಿವಂಗತ ರೈಸ್‌ರವರು ಈ ಮಾರ ನೃಪತಿ ಯಾರು ಎಂಬುದನ್ನು ನಿರ್ಧರಿಸಿರುವುದು ಕಷ್ಟತರವಾಗಿದೆ ಎಂದೂ ಕಷ್ಟವನ್ನು ನಿವಾರಿಸಿ ನಿಜವಾದ ಮಾರನೃಪತಿಯನ್ನು ನಿರ್ಧರಿಸಲು ಹೊಸಬೆಳಕು ಬೇಕಾಗಿದೆ ಎಂದು ಹೇಳಿ ದ್ದಾರೆ.[೩೦] ಮೊರಲೆ ಶಾಸನದಲ್ಲಿ ಉಕ್ತವಾಗಿರುವ ಪೊಯ್ಸಳ ಮಾರುಗನೇ ಸಳನಿರ ಬೇಕೆಂದು ಮೇಲೆ ವಿವರಿಸಿದ್ದೇನೆ. ಈ ಮಾರುಗನನ್ನೇ "ಸಮ್ಯಕ್ತ್ವ ಮಾರನೃಪತಿ" ಎಂದಿರುವಂತೆ ತೋರುತ್ತದೆ. ಹೊಯ್ಸಳರ ಬಿರುದುಗಳಲ್ಲಿ "ಸಮ್ಯಕ್ತ್ವ ಚೂಡಾಮಣಿ"

೨೯ ಮೂಡಗೆರೆ ೧೮ ಮತ್ತು ೯ನೇ ಶಾಸನಗಳು.

೩೦ ಕಡೂರು ಜಿಲ್ಲಾ ಶಾಸನಗಳು Introduction ಪುಟ ೧೫. EC VI.

ಎಂಬುದು ಮುಖ್ಯವಾದುದು.[೩೧] ಬೇರೆ ಯಾವ ವಂಶದ ರಾಜರಿಗೂ ಈ ಬಿರುದು ಇರುವುದಿಲ್ಲ. ಆದ್ದರಿಂದ ಸಮ್ಯಕ್ತ್ವ ಮಾರನೃಪತಿಯು ಹೊಯ್ಸಳ ರಾಜನೇ ಆಗಿರಬೇಕು.

ಈ ಶಾಸನದ ಪ್ರಥಮದಲ್ಲಿ 'ರಾಜ್ಯಂಗೆಯೆ' ಎಂದು ಹೇಳಿರುವ ರಾಜನು ಈ ಮಾರನೃಪತಿ ಅಥವಾ ಪೊಯ್ಸಳ ಮಾರುಗನೇ ಎಂಬುದರಲ್ಲಿ ಸಂದೇಹವಿಲ್ಲ. ಸೋಸವೂರನ್ನು ಕಟ್ಟಿದವನೇ ಸಳ. ಅವನಿಂದ ಆರಂಭವಾದ ಹೊಯ್ಸಳ ಸಾಮ್ರಾಜ್ಯವು ಅಳಿಯುವವರೆಗೂ ಸೋಸವೂರಿನಲ್ಲಿ ಹೊಯ್ಸಳರಲ್ಲದೆ ಬೇರೆ ಯಾವ ವಂಶದ ರಾಜರೂ ಬಂದು ರಾಜ್ಯಂಗಯ್ಯಲು ಸಾಧ್ಯವಿಲ್ಲ.

**ಜಾಕಬ್ಬೆ :** ರಾಜ್ಯಸ್ಥಾಪಕ ಹೊಯ್ಸಳನ ಕಾಲದಲ್ಲಿ ಅಥವ ಅವನ ಮರಣವಾದ ಸಮೀಪ ಕಾಲದಲ್ಲಿ ಪ್ರಕಟವಾದ ಇನ್ನೂ ಕೆಲವು ಶಾಸನಗಳನ್ನು ಇಲ್ಲಿ ಗಮನಿಸಬೇಕಾಗಿದೆ.

ಸೋಸವೂರಿನ ಒಂದು ನಿಷಧಿಯಮೇಲೆ "ಗಂಗದಾಸ ಸೆಟ್ಟಿಯು ನೇಮದಿಂದ ಸಮಾಧಿ ವ್ರತಮಾಡಿ ಮುಡಿಪಿ ಪರೋಕ್ಷಕ್ಕೆ ಸಂದಲು ಅವನ ಮಗ ಚಟಯ್ಯನು ಜಿನಶಾಸನವನ್ನು ನಿಲ್ಲಿಸಿದನು" ಎಂದಿದೆ.[೩೨] ಅರಕಲ್ಲಿನ ಎರಡು ಶಿಲಾಶಾಸನಗಳಿರುವ ಮೊರಲೆ ಗ್ರಾಮದ ಒಂದು ವೀರಗಲ್ಲಿನಲ್ಲಿ "ಚಿಟ್ಟಸೆಟಿ ದಿವಮಂ ಪೊಕ್ಕಂ ಅನಂತರ ವಾತನ **ಸತಿ ಜಾಕಬ್ಬೆ** ಪರೋಕ್ಷ ವಿನಯಮಂ ಮೆರದು ಸಿಲಾ ಸ್ತಂಭವನ್ನು ನಿಲ್ಲಿಸಿದಳು" ಎಂದಿದೆ.[೩೩] ಜಾಕಬ್ಬೆ ಗನ್ತಿಯು ಸೋಸವೂರಿನಲ್ಲಿ ಮುಕ್ತಿ ಪಡೆದ ವಜ್ರಪಾಣಿಪಂಡಿತರ ಶಿಷ್ಯಳು. ಈ ಜಾಕಬ್ಬೆಯು ಸೋಸವೂರ ವಿನಿಯಾದಿತ್ಯ ಅರಸನಿಗೂ, ಆ ವೂರಿನ ಒಕ್ಕಲಿಗರಿಗೂ ಪೊನ್ನುರೆ ಕೊಟ್ಟು, ಮಣ್ಣರೆಕೊಂಡು ಅಂದರೆ ಕಾಲೋಚಿತವಾದ ಕ್ರಯವನ್ನು ಕೊಟ್ಟು ಸಾಗುವಳಿಯಾದ ಭೂಮಿಯನ್ನು ಕ್ರಯಕ್ಕೆ ತೆಗೆದುಕೊಂಡು, ಆ ಭೂಮಿಯನ್ನು ಆ ಸೋಸವೂರಿನ ಬಸದಿಗೂ, ನಿಷಧಿಗೂ, ಮಕರ ಜಿನಾಲಯಕ್ಕೂ ಜಯ ಸಂವತ್ಸರದ ಚೈತ್ರಶುದ್ಧ ದಶಮಿಯಂದು ಭೂದಾನ ಮಾಡಿದಳು.[೩೪] ಈ ಶಾಸನ ವರ್ಷಕಾಲ ೯೨೪ನೆಯ ಜಯ ಸಂವತ್ಸರ ಎಂದಿದೆ. ಅಂಕೆ ೯೨೪ ತಪ್ಪು. ಅದು ೯೧೬ ಇರಬೇಕು. ಆಗ ಇದ್ದ ಹೊಯ್ಸಳ ರಾಜ ಒಂದನೆಯ ವಿನಿಯಾದಿತ್ಯ ವಜ್ರಪಾಣಿ ವ್ರತೀಶ್ವರರ ಶಿಷ್ಯರಾದ ಗಂಗವಾಡಿಯ ಅರಸರಾದ ರಾಜಮಲ್ಲ ಮತ್ತು ನೀತಿಮಾರ್ಗರ ಕಾಲವೂ ಇದೇ. ಈ ಜಯ ಸಂವತ್ಸರಕ್ಕೆ ಸ್ವಲ್ಪಕಾಲ ಮುಂಚೆ ವಜ್ರಪಾಣಿ ಯತಿಗಳು ಪರೋಕ್ಷವನ್ನು ಹೊಂದಿರಬೇಕು. ಅನಂತರ ಸಮ್ಯಕ್ತ್ವ ಮಾರ ಭೂಪತಿ ಎಂಬ ಹೊಯ್ಸಳ ಮಾರುಗನೂ ಮಡಿದಿರಬೇಕು.

**ನಾಗಲತೆಯ ದಾನ :** ಸಂಧಿ ವಿಗ್ರಹಿ ಏಚಿಮಯ್ಯ ಮತ್ತು ಇವನ ಸತಿ ಶಾನ್ತಿಯಬ್ಬೆ. ಇವರ ಸುಪುತ್ರಿ ನಾಗಲತೆ. ಈ ಕುಮಾರಿಯು ಮೇಲು ಮೂಕಯ್ಯನ ಮಗನಾದ ವೀರಶಟ್ಟಿಯ ಮೊಮ್ಮಗಳು. ಸಜ್ಜನಳಾದ ಈ ನಾಗಲತೆಯು ಕಡಿಚೂರಿನ ಗದ್ದೆ ಮತ್ತು ಚಿದ್ದಲನ್ನು ಕಾಳ್ಚಟ್ಟಿ ಅಗ್ರಹಾರದ ಸಮಸ್ತರಿಗೂ ದಾನಕೊಟ್ಟಳು. ಈ ರೀತಿ

---

೩೧ New Mysore Gazetteer by Sri C. Hayavadana Rao, Vol II, Part II Page ೧೩೧೨.

೩೨ ಮೂಡಗೆರೆ ೧೦. ೩೩ ಚಿಕ್ಕಮಗಳೂರು ೧೩೯. ೩೪ ಮೂಡಗೆರೆ ೯.

ಯಾಗಿ ಸಾರ್ವಜನಿಕರ ಉಪಯೋಗಕ್ಕೆ ದಾನ ಮಾಡಿದ ಭೂಮಿಯನ್ನು ರೂಢಿಸಿ ಅದರ ಉತ್ಪತ್ತಿಯನ್ನು ಸದ್ವಿನಿಯೋಗ ಮಾಡಲು ಒಂದು ಸಮಿತಿಯು ನೇಮಕವಾಯಿತು. ಆ ಸಮಿತಿಗೆ ಪೊಯ್ಸಳನೇ ಅಧ್ಯಕ್ಷನಾಗಿ ಧಾರಾದತ್ತವಾದ ದಾನವನ್ನು ಶಕ ವರುಷ ೯೧೧ನೆಯ ವಿರೋಧಿಸಂವತ್ಸರದ ಚೈತ್ರಮಾಸದ ಶುದ್ಧ ತ್ರಯೋದಶೀ ಮಂಗಳವಾರದಂದು ಸ್ವೀಕರಿಸಿದನು.[೩೫]

ಈ ಶಾಸನದಲ್ಲಿರುವ ಶಕ ವರುಷದ ಸಂಖ್ಯೆ ತಪ್ಪಾಗಿದೆ.[೩೬] ಶಾಲಿವಾಹನ ಶಕ ೧೦ನೆಯ ಶತಮಾನದಲ್ಲಿ ಶಕ ೯೧೧ (ಕ್ರಿ. ಶ. ೯೮೯) ಮತ್ತು ಶಕ ೯೭೧ (ಕ್ರಿ. ಶ. ೧೦೪೯) ರಲ್ಲಿಯೂ ವಿರೋಧಿ ಸಂವತ್ಸರವು ಬಂದಿದೆ. ಈ ಶಾಸನೋಕ್ತವಾದ ಪೊಯ್ಸಳನನ್ನು ಎರಡನೇ ವಿನಿಯಾದಿತ್ಯ ಎಂದು ಊಹಿಸಿ ಅವನಿದ್ದ ಕಾಲವಾದ ಶಕ ೯೭೧ (ಕ್ರಿ. ಶ. ೧೦೪೯) ನೇ ವಿರೋಧಿ ಸಂವತ್ಸರ ಎಂದು ಈ ಶಾಸನದ ಇಂಗ್ಲಿಷು ಪರಿವರ್ತನೆಯ ಮೇಲ್ಭಾಗದಲ್ಲಿ ಪ್ರಕಟಿಸಿದೆ. ವಿನಿಯಾದಿತ್ಯ ಎಂದು ಊಹಿಸಲು ಈ ಶಾಸನದಲ್ಲಿ ಯಾವ ಕುರುಹೂ ಇರುವುದಿಲ್ಲ. ಆದ್ದರಿಂದ ಈ ಶಾಸನ ವರುಷ ೯೧೧ (ಕ್ರಿ. ಶ. ೯೮೯) ನೆಯ ವಿರೋಧಿ ಇರಬೇಕು. ಆಗ ಇದ್ದ ಹೊಯ್ಸಳನು ಈ ವಂಶ ಸ್ಥಾಪಕನಾದ ಪೊಯ್ಸಳನಲ್ಲದೆ ಅನ್ಯರಲ್ಲ ಎಂದು ನಿರ್ಧಾರವಾಗುವುದು.

**ಹೊಯ್ಸಳನೂ ತಲಕಾಡು ಗಂಗರೂ**: ಕನ್ನಡಿಗರು ಇಂದಿಗೂ ಜನಪದ ಆಟವಾಗಿ ಪ್ರದರ್ಶಿಸುತ್ತಿರುವ "ಕರೀಭಂಟನ ಕಥೆ" ಯು ಹೊಯ್ಸಳ ರಾಜಕುಮಾರಿಗೂ ಮಾರಭೂಪಾಲನ ಕುಮಾರನಾದ ರಕ್ಕಸ ಗಂಗನಿಗೂ ನಡೆದ ವಿವಾಹ ಸಂಬಂಧದ ಇತಿಹಾಸ ಘಟನೆಗಳ ಆಧಾರದಿಂದ ರಚಿತವಾಗಿದೆ. ಈ ಕಥೆಯ ಸಾರಾಂಶ ಏನಂದರೆ:—

ಹಳೇಬೀಡಿನ ರಾಜ ಬಲ್ಲಾಳನ ಕುವರಿ ಜಗನ್ಮೋಹಿನಿಯು ಬಲು ಚಲುವೆ. ರಾಜನು ಅನೇಕ ರಾಜಕುಮಾರರ ಭಾವಚಿತ್ರಗಳನ್ನು ತರಿಸಿ ಕುಮಾರಿಯು ಇಷ್ಟಪಡುವ ವರನಿಗೇ ಕೊಟ್ಟು ವಿವಾಹ ಮಾಡುವುದಾಗಿ ತಿಳಿಸಿದನು. ಜಗನ್ಮೋಹಿನಿಯು ಧಾರಾನಗರದ ಮಾರಭೂಪಾಲನ ಕುಮಾರ ಕರೀಭಂಟನ ಭಾವ ಚಿತ್ರವನ್ನು ನೋಡಿ ಮೋಹಿಸಿದಳು. ಕರೀಭಂಟನು ಬಲ್ಲಾಳನ ಆಹ್ವಾನವನ್ನು ಅಂಗೀಕರಿಸಿದನು. ಆದರೆ ಅವನ ತಾಯಿ ಬಲವಂತೆಯೂ, ಮಂತ್ರಿಗಳೂ "ವಿರೋಧಿಗಳು ಕರೀಭಂಟನನ್ನು ಕೊಲ್ಲಲು ಮಾಡಿದ ಯತ್ನ ಇದು" ಎಂದು ಸಂಬಂಧವನ್ನು ವಿರೋಧಿಸಿದರು. ಕರೀಭಂಟನು ತಾಯಿಯನ್ನೂ ಮಂತ್ರಿಯನ್ನೂ ಸಮಾಧಾನ ಮಾಡಿ ಪ್ರಯಾಣ ಹೊರಟನು. ಮಾರ್ಗದಲ್ಲಿ ಎದುರಿಸಿದ ಗೆಜ್ಜಲ ಹಟ್ಟಿಯ ಧಾರಾಸಿಂಗನೆಂಬ ಕಳ್ಳರ ಒಡೆಯನನ್ನು ಹರಣ ಭರಣ ಮಾಡಿದನು. ಮುಂದೆ ಪ್ರಯಾಣಮಾಡಿ ಗೌತಮ ಕ್ಷೇತ್ರದ ಕಾವೇರಿಯಲ್ಲಿ ಮಿಂದು ಆಯಾಸವನ್ನು ಪರಿಹರಿಸಿಕೊಳ್ಳುತ್ತಿದ್ದನು. ಆಗ ಒಂದು ಮಾಯಾ ಹಂಸವು ಕಾಣಿಸಿಕೊಂಡು ತೊಣ್ಣೂರಿನ ರಾಜ ಭೇತಾಳ ಮತ್ತು ಅವನ ಪತ್ನಿ ರಕ್ಕಸಿಯ ಕುಮಾರಿ

---

೩೫ ಮೂಡಗೆರೆ ೨೧ನೇ ಶಾಸನ.

೩೬ Mudagere 21 and 9 of the same Viniyadıtya reign also contain discrepancies in the date. ಕಡೂರು ಜಿಲ್ಲಾ ಶಾಸನಗಳು E.C. VI Introduction page 15.

ಯಾದ ಪುಂಡರೀಕಾಕ್ಷಿಯು ದೇವತಾರಾಧನೆ ಮಾಡುತ್ತಿದ್ದ ಉಪವನಕ್ಕೆ ಕರದೊಯ್ಯಿತು. ಅಲ್ಲಿಯೇ ಈರ್ವರಿಗೂ ಗಾಂಧರ್ವವಿವಾಹವೂ ಆಯಿತು. ಆದರೆ ತಾಯಿ ತೊಣ್ಣೂರು ರಕ್ಕಸಿಯು ಈ ವಿವಾಹವನ್ನು ವಿರೋಧಿಸಿ, ಅಳಿಯನನ್ನು ಕೊಂದು ತನ್ನ ತಮ್ಮ ಮುದಿ ಬೊಮ್ಮನಿಗೆ ಕೊಡಬೇಕೆಂದು ನಿರ್ಧರಿಸಿದಳು, ಕೂಡಲೇ ಅಳಿಯನನ್ನು ಕೊಲ್ಲಲ್ಲು ಉಪಾಯಾಂತರದಿಂದ ಅವನನ್ನು ಹಿಂಬಾಲಿಸಿ ಹೋದಳು. ಕರೀಭಂಟನು ಓಡಿಹೋಗಿ ಮಲ್ಲಿಗೆಯೂರ ಪಂಚಾಯಿತರಾದ ಗೌಡರನ್ನೂ ಮೋಸಗೊಳಿಸಿ, ಕರಿರಾಜನನ್ನು ಕೊಂದಳು. ಕರಿರಾಜನನ್ನು ರಕ್ಷಿಸುವುದಾಗಿ ಪಣತೊಟ್ಟಿದ್ದ ಪಂಚರು ತಮ್ಮ ವಚನ ಹುಸಿಯಾಯಿತೆಂದು ಅಗ್ನಿಕುಂಡದಲ್ಲಿ ಬಿದ್ದರು. ಪತಿಯೆಂದು ಭಾವಿಸಿದ್ದ ಜಗನ್ಮೋಹಿನಿಯು ಪತಿಯೊಡನೆ ಚಿತೆಯನ್ನೇರಲು, ಈಶ್ವರನು ಕುಮಾರಿಯ ಪತಿಭಕ್ತಿಗೆ ಮೆಚ್ಚಿ ಎಲ್ಲರನ್ನೂ ಬದುಕಿಸಿದನು.

ಈ ಕಥೆಯಲ್ಲಿ ಉಕ್ತವಾಗಿರುವ ಕವಿವರ್ಣನೆ, ಧಾರ್ಮಿಕ ಭಾವನೆ, ಉತ್ಪ್ರೇಕ್ಷೆ, ಪವಾಡ, ಮನರಂಜನೆ ಮೊದಲಾದ ಜೊಳ್ಳು, ಸಿಪ್ಪೆ, ಕಸಗಳನ್ನು ವಿಂಗಡಿಸಿ ತೆಗೆದು ಹಾಕಿ ರಸವಾದ ಇತಿಹಾಸ ಘಟನೆಗಳನ್ನು ಶೋಧಿಸುವುದು ಕಷ್ಟಕರವಾಗಿದೆ.[೩೭] ಗಂಗ ಮಾರಸಿಂಹನ ಮಗನಾದ ರಕ್ಕಸ ಗಂಗನಿಗೂ, ಹೊಯ್ಸಳನ ಕುಮಾರಿಗೂ ನಡೆದ ವಿವಾಹ ಸಂಬಂಧವೇ ಈ ಬಯಲಾಟದ ಕಥಾವಸ್ತು. ಈ ವಿವಾಹವು ಕ್ರಿ. ಶ. ೯೭೪ ಮತ್ತು ೯೭೮ರ ಮಧ್ಯೆ ನಡೆದಿರಬೇಕು. •

**ಚಾಮುಂಡರಾಯ:** ಗಂಗ ಮಾರಸಿಂಹ ಅವನ ಮಕ್ಕಳಾದ ರಾಚಮಲ್ಲ ಮತ್ತು ರಕ್ಕಸಗಂಗ ಈ ಮೂವರು ರಾಜರ ಬಳಿ ಅನುಕ್ರಮವಾಗಿ ಮಂತ್ರಿ ಮತ್ತು ಸಂಧಿವಿಗ್ರಹಿಯಾಗಿದ್ದ ಚಾಮುಂಡರಾಯನು, ಗಂಗರಾಜ್ಯವು ವಿನಾಶವಾದಮೇಲೆ, ಹೊಯ್ಸಳನ ಮಹಾಪ್ರಧಾನಿ ಮತ್ತು ಸಂಧಿವಿಗ್ರಹಿಯಾಗಿದ್ದಂತೆ ತಿಳಿದುಬರುವುದು. ದ್ವಿಜಕುಲ ತಿಲಕರಾದ ಚಾಮುಂಡರಾಯನ ಮಕ್ಕಳಾದ ಮಾದಿರಾಜ, ಜಿನದೇವನ ಮತ್ತು ಎಲ್ಲಪ್ಪಯ್ಯ ಎಂಬ ಮೂರು ಜನ ಸೋದರರು. ಮಹಾಮಂಡಳೇಶ್ವರ ಪೊಯ್ಸಳನ ರಾಜ್ಯಾಡಳಿತದಲ್ಲಿ ದೇಶವಾಣಿಯ ರಾಯಘಟ್ಟದ ಕೆರೆಯನ್ನೂ ಒಂದು ದೇಗುಲವನ್ನೂ ನಿರ್ಮಿಸಿದರು.

---

೩೭ ಕರೀಭಂಟನ ಕಥೆಯ ವಿಷಯವಾಗಿ ಬೇರೆ ಲೇಖನವನ್ನು ಬರೆಯುವೆನು.

## ಕೆಲವು ಘಟನೆಗಳ ಕಾಲ

| ಘಟನೆಗಳು | ಕಾಲ | |
|---|---|---|
| | ಸಂವತ್ಸರ | ಇಸವಿ |
| ೧. ಸೋಸವೂರ ನಿರ್ಮಾಣ ಸಿರಿವೂರು ಕಾಳಗ | ಶಕ ೮೫೯ನೆಯ ಹೇವಿಳಂಬಿ ಸಂವತ್ಸರದ ಭಾದ್ರಪದ ಬಹುಳ ೩೦ ಬೃಹಸ್ಪತಿವಾರಕ್ಕೆ ಮುಂಚೆ | 7-9-937ಕ್ಕೆ ಮುಂಚೆ |
| ೨. ಪಟ್ಟಾಭಿಷೇಕ | ಶಕ ೮೬೦ನೆಯ ವಿಳಂಬಿ ಸಂವತ್ಸರದ ಚೈತ್ರ ಶು. ೧೦ ಬೃಹಸ್ಪತಿವಾರ. | 15-3-938 |
| ೩. ಬಿಂಡಿಗೆನವಿಲೆ ತುರುಗಾಳಗ | ಶಕ ೭೯೧ನೆಯ ಶುಕ್ಲ ಸಂವತ್ಸರದ ಆಷಾಢ | ಆಗಸ್ಟ್ - ಸೆಪ್ಟೆಂಬರ್ 969 |
| ೪. ಹೊಯ್ಸಳ ರಾಜಕುಮಾರಿ ಜಗನ್ಮೋಹಿನಿಯ ವಿವಾಹ. | ಶಕ ೮೯೬-೯೦೦ರ ಮಧ್ಯಭಾಗದಲ್ಲಿ | 974 - 978ರ ನಡುವೆ |
| ೫. ನಾಗಲತೆಯ ದಾನ | ಶಕ ೯೧೧ನೆಯ ಚೈತ್ರ ಶು. ೧೩ ಮಂಗಳವಾರ | 989ನೆಯ ಮಾರ್ಚ್ - ಏಪ್ರಿಲ್ |
| ೬. ವಜ್ರಪಾಣಿ ಪ್ರತೀಶ್ವರರ ಮುಕ್ತಿ | ಶಕ ೯೧೬ನೆಯ ಜಯ ಸಂವತ್ಸರಕ್ಕೆ ಮುಂಚೆ. | 994ನೆಯ ಮಾರ್ಚ್-ಏಪ್ರಿಲ್ ತಿಂಗಳ ಮುಂಚೆ |
| ೭. ಜಾಕಬ್ಬೆ ಗಂತಿಯ ದಾನ | ಶಕ ೯೧೬ನೆಯ ಜಯ ಸಂ. ಚೈತ್ರ ಶು. ೧೦. | 994ನೆಯ ಮಾರ್ಚ್ - ಏಪ್ರಿಲ್ |
| ೮. ಪೊಯ್ಸಳನ ಮರಣ | ೫ ಮತ್ತು ೭ನೆ ಘಟನೆಗಳ ನಡುವೆ | 989 ಮತ್ತು 994ರ ನಡುವೆ |

# ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು

ಶ್ರೀ ಶ್ರೀನಿವಾಸ ರಿತ್ತಿ, ಎಂ.ಎ., ನೀಲಗಿರಿ

## ೧

ನಾಡಿನ ಇತಿಹಾಸ ರಚನೆಗೆ ಶಾಸನಗಳು ಆಧಾರಸ್ತಂಭಗಳೆಂದು ಎಲ್ಲರಿಗೂ ತಿಳಿದ ಮಾತು. ಅವುಗಳನ್ನು ಕೂಲಂಕಷವಾಗಿ ಪರೀಕ್ಷಿಸಿದಾಗ, ಕೇವಲ ರಾಜಕೀಯ ಇತಿಹಾಸವಷ್ಟೇ ಅಲ್ಲ, ಧರ್ಮ, ಶಿಕ್ಷಣ, ಭಾಷೆ, ಸಾಹಿತ್ಯ, ಸಮಾಜನೀತಿ ಇವುಗಳ ದೃಷ್ಟಿಯಿಂದಲೂ ಅವು ಮಹತ್ವದವುಗಳಾಗಿರುವುವೆಂಬದು ಕಂಡುಬರದಿರದು. ಸಾಧಾರಣವಾಗಿ ಯಾವದೊಂದು ರಾಜಕೀಯ ಘಟನೆಯನ್ನು ಕುರಿತೋ, ಯಾವನೊಬ್ಬ ಅರಸು ಕೊಟ್ಟ ದಾನದ ವಿಷಯವಾಗಿಯೋ ಇಲ್ಲವೆ ಇನ್ನಾವನೋ ಯೋಧನ ವೀರಮರಣವನ್ನು ಕುರಿತೋ ಹೇಳುವುದು ಶಾಶನಗಳ ಮುಖ್ಯ ಉದ್ದೇಶವೆಂದು ಕಂಡುಬಂದರೂ ಅವುಗಳಲ್ಲಿ ಆನುಷಂಗಿಕವಾಗಿಯಾದರೂ ಬಂದ ಅನೇಕ ವಿಷಯಗಳು ಇತರ ದೃಷ್ಟಿಗಳಿಂದ ಬಹಳ ಮಹತ್ವವುಳ್ಳವುಗಳಾಗಿರುತ್ತವೆ. ಉದಾಹರಣೆಗೊಂದು ಶಾಸನವನ್ನು ತೆಗೆದುಕೊಳ್ಳಬಹುದು. ಧಾರವಾಡ ಜಿಲ್ಲೆಯಲ್ಲಿ ಮುಂಡರಗಿ ಪೇಠಾದಲ್ಲಿಯ ಆಲೂರು ಎಂಬ ಗ್ರಾಮದಲ್ಲಿ ಶಾಸನವೊಂದಿದೆ. ಸುರಿಗೆಯ ನಾಗರಸನೆಂಬೊಬ್ಬನು ಕೆಲವೊಂದು ದಾನಗಳನ್ನು ಕೊಟ್ಟನೆಂದು ಹೇಳುವದೇ ಈ ಶಾಸನದ ಉದ್ದೇಶ. ಆ ದಾನದ ವಿವರಣೆಯಲ್ಲಿ "ಋಗ್ವೇದ ಬಾಲಶಿಕ್ಷೆಯ ಖಂಡಿತದಲ್ಲಿ ಸ್ವಾಧ್ಯಾಯಂಗೆಯ್ವ ಮಾಣಿಯರ ಗ್ರಾಸಕ್ಕೆ" "ಉಪಾಧ್ಯಾಗ್ಗೆ" ಎಂದು ಮುಂತಾಗಿ ಹೇಳಲಾಗಿದೆ.[೧] ಇಂಥ ಮಾತುಗಳಿಂದ ರಾಜಕೀಯ ಇತಿಹಾಸದ ಜೊತೆಗೆ ಅಂದು ಪ್ರಚಲಿತವಿದ್ದ ಶಿಕ್ಷಣ ಪದ್ಧತಿಯನ್ನೂ ಅಭ್ಯಸಿಸಲು ಉಪಯೋಗವಾಗುವದು.

ಭಾಷಾಶಾಸ್ತ್ರದ ದೃಷ್ಟಿಯಿಂದ ಇವುಗಳ ಉಪಯುಕ್ತತೆ ಅಷ್ಟಿಷ್ಟಲ್ಲ. ಭಾಷೆ ಕಾಲಕಾಲಕ್ಕೆ ಹೇಗೆ ಬೆಳೆಯುತ್ತ ಬಂದಿತು, ಯಾವ ಯಾವ ಬದಲಾವಣೆಗಳನ್ನು ಹೊಂದಿತು ಎಂಬುದನ್ನೂ ತಿಳಿಯುವದಕ್ಕಾಗಿ ಶಾಸನಗಳ ಪರಿಶೀಲನೆ ಅತ್ಯಗತ್ಯ. ಹಾಗೆ ನೋಡಿದರೆ, ಈ ವಿಷಯದಲ್ಲಿ ಸಾಹಿತ್ಯ ಗ್ರಂಥಗಳಿಗಿಂತಲೂ ಶಾಸನಗಳ ಮಹತ್ವ ಹೆಚ್ಚು ಎನ್ನಬಹುದು. ಯಾಕೆಂದರೆ ಸಾಮಾನ್ಯವಾಗಿ ಶಾಸನಗಳಲ್ಲಿ ಅವು ಬರೆಯಲ್ಪಟ್ಟ ಕಾಲವು ನಿರ್ದೇಶಿತವಾಗಿರುತ್ತದೆ. ಅದರ ಸಹಾಯದಿಂದ ಅಂದಿನ ಭಾಷೆಯ ಸ್ವರೂಪವನ್ನೂ, ಅದು ಬಳಕೆಯಲ್ಲಿದ್ದ ನಿಶ್ಚಿತ ಕಾಲವನ್ನೂ ಕಂಡುಕೊಳ್ಳಬಹುದು. ಹಾಗೆಯೇ ಕಾಲಕಾಲಗಳಲ್ಲಿ ಭಾಷೆಯಲ್ಲುಂಟಾದ ಮಾರ್ಪಾಡುಗಳನ್ನೂ ಬೆಳವಣಿಗೆಯನ್ನೂ ಸುಲಭವಾಗಿ ಗುರುತಿಸಬಹುದು. ಕೆಲಸಾರೆ ಶಾಸನಗಳಲ್ಲಿ ಅವುಗಳ ಕಾಲವು ಸ್ಪಷ್ಟವಾಗಿ ಹೇಳಲ್ಪಟ್ಟಿರದಿದ್ದರೂ ಲಿಪಿಶಾಸ್ತ್ರದ ಸಹಾಯದಿಂದ ಅದನ್ನು ನಿರ್ಣಯಿಸುವುದು ಕಠಿಣವಲ್ಲ. ಕನ್ನಡ ಶಾಸನಗಳಲ್ಲಿ ಹಲ್ಮಿಡಿ ಹಾಗೂ ಬಾದಾಮಿ ಶಾಸನಗಳು ಸದ್ಯಕ್ಕೆ ದೊರೆತವುಗಳಲ್ಲಿ ಪ್ರಾಚೀನತಮವಾದುವುಗಳೆಂದು ಸಾಮಾನ್ಯ ಗ್ರಹಿಕೆಯಿದೆ. ಸುಮಾರು ಕ್ರಿ. ಶ. ೬ನೇ ಶತಮಾನದ ಈ ಶಾಸನಗಳಲ್ಲಿ ಕನ್ನಡ ಗದ್ಯದ ಉಗಮವನ್ನು ಕಾಣಬಹುದು.

ಸಾಹಿತ್ಯ ಹಾಗೂ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದಲೂ ಶಾಸನಗಳಿಗೆ ಬಹಳ ಮಹತ್ವವಿದೆ. ಶಾಸನಗಳನ್ನು ಬರೆಯುತ್ತಿದ್ದವರು ಸಾಧಾರಣವಾಗಿ ವಿದ್ಯಾವಂತರು ಹಾಗೂ ಕವಿಗಳು

---

೧ ಮುಂಬಯಿ ಕರ್ನಾಟಕದ ಶಿಲಾಶಾಸನಗಳು. ಸಂಪುಟ ೧, ಭಾಗ ೨, ಪುಟ ೨೨೫.

ಆಗಿರುತ್ತಿದ್ದುದರಿಂದ, ಅವುಗಳನ್ನು ಯಾವದೇ ಉದ್ದೇಶದಿಂದ ಬರೆದರೂ, ಅಲ್ಲಿ ಲೇಖಕನ ಪ್ರತಿಭೆ ವ್ಯಕ್ತವಾಗುವುದು ಸಹಜವೇ. ಮೊದಮೊದಲಿನ ಶಾಸನಗಳಲ್ಲಿ ಈ ಸಾಹಿತ್ಯಗುಣ ಅಷ್ಟೊಂದು ಕಂಡುಬರದಿದ್ದರೂ ಮುಂದೆಮುಂದೆ, ವಿಶೇಷವಾಗಿ ೧೧-೧೨ನೆಯ ಶತಮಾನಗಳಲ್ಲಿ ಇದು ಶಾಸನಗಳ ಒಂದು ಮುಖ್ಯ ಲಕ್ಷಣವೇ ಆಯಿತು. ಈ ಕಾಲದಲ್ಲಿ ಕಾವ್ಯಗುಣವಿಲ್ಲದ ಶಾಸನಗಳು ಬಹಳ ಕಡಿಮೆ ಎಂದು ಹೇಳಬಹುದು. ಕೆಲವಂತೂ ಸುಂದರವಾದ ಗದ್ಯ ಪದ್ಯ ಗಳಿಂದ ಕೂಡಿ ಚಂಪೂಕಾವ್ಯದ ಮಾದರಿಗಳಂತಿವೆ. ಕೆಲವೇಳೆ ಇವುಗಳಲ್ಲಿ ಕಾವ್ಯಾಂಶವೇ ಹೆಚ್ಚಾಗಿ ಮುಖ್ಯ ವಿಷಯವೇ ಗೌಣ ಸ್ವರೂಪ ತಾಳಿದ್ದೂ ಕಂಡುಬರುತ್ತದೆ. ಇಂಥ ಶಾಸನಗಳ ಅಭ್ಯಾಸ ಸಾಹಿತ್ಯ ಗ್ರಂಥಗಳ ಅಭ್ಯಾಸಕ್ಕೆ ಪೂರಕವಾಗುತ್ತದೆ ಎಂದು ಹೇಳಬಹುದು. ಒಮ್ಮೊಮ್ಮೆ ಕಾವ್ಯಗಳಲ್ಲಿ ಪಾರಿಭಾಷಿಕ ಶಬ್ದಗಳೂ ಅಷ್ಟೊಂದು ಸ್ಪಷ್ಟವಲ್ಲದ ಉಕ್ತಿಗಳೂ ಬರುವದುಂಟು. ಇಂಥ ಸಂದರ್ಭಗಳಲ್ಲಿ ಅಂಥವುಗಳನ್ನು ಸಮರ್ಪಕವಾಗಿ ತಿಳಿದುಕೊಳ್ಳಲು ಶಾಸನಗಳು ಸಹಾಯಕ ವಾಗುತ್ತವೆ.

ಸಾಹಿತ್ಯ ಚರಿತ್ರೆಯ ಮೇಲೂ ಶಾಸನಗಳು ಬೆಳಕನ್ನು ಬೀರುತ್ತವೆ. ಕನ್ನಡ ಸಾಹಿತ್ಯದ ಪ್ರಾಚೀನತೆ ಆರನೆಯ ಶತಮಾನದವರೆಗೂ ಹೋಗಿದೆಯೆಂಬುದು ಶಾಸನಗಳಿಂದಲೇ ತಿಳಿದುಬಂದ ವಿಷಯ. ಈ ಸಂದರ್ಭದಲ್ಲಿ ತೋಮರ ರಗಳೆಯ ಉದಾಹರಣೆಯನ್ನು ತೆಗೆದುಕೊಳ್ಳಬಹುದು. ರಗಳೆಯ ಉಪಯೋಗ ಆದಿಪಂಪನ ಕಾಲದಿಂದಲೂ ರೂಢಿಯಲ್ಲಿದ್ದರೂ ಅದನ್ನು ಒಂದೇ ಒಂದು ವೃತ್ತವಾಗಿ ತೆಗೆದುಕೊಂಡು ಅದರಲ್ಲಿಯೇ ಕಾವ್ಯಗಳನ್ನು ರಚಿಸಿದ ಮೊಟ್ಟಮೊದಲ ಕವಿ ಹರಿಹರನೇ ಎಂಬದು ಎಲ್ಲರೂ ಒಪ್ಪಿದ ಮಾತು. ಅವನ ಕಾಲ ಸುಮಾರು ಕ್ರಿ. ಶ. ೧೨೦೦. ಆದರೆ ಬಳ್ಳಾರಿ ತಾಲ್ಲೂಕಿನ ಕೋಗಳಿಯೆಂಬಲ್ಲಿ ಕ್ರಿ. ಶ. ೧೦೫೫ರ ಶಾಸನವೊಂದು ದೊರೆತಿದೆ.[೧] ಅದರಲ್ಲಿ ಕೆಲವು ಪದ್ಯಗಳು ರಗಳೆಯ ವೃತ್ತದಲ್ಲಿದ್ದು ಅದಕ್ಕೆ 'ತೋಮರ ರಗಳೆ' ಎಂಬ ಅಪೂರ್ವ ವಾದ ಹೆಸರಿನಿಂದ ಕರೆಯಲಾಗಿದೆ. ಈ 'ತೋಮರ ರಗಳೆ'ಯ ವಿಷಯ ಶಾಸನ ಸಾಹಿತ್ಯದ ಮೂಲಕವೇ ತಿಳಿದುಬಂದಿದೆ. ಇದೇ ರೀತಿಯಾಗಿ ತ್ರಿಪದಿಯ ಮೊದಲ ರೂಪವೂ ಶಾಸನ ಗಳಲ್ಲಿಯೇ ನೋಡಸಿಗುತ್ತದೆ.[೨]

ನೃಪತುಂಗನ ಕವಿರಾಜಮಾರ್ಗದಂತಹ ಲಾಕ್ಷಣಿಕ ಗ್ರಂಥಗಳಲ್ಲಿ ಹಿಂದಿನ ಅನೇಕ ಕವಿಗಳ, ಗ್ರಂಥಕಾರರ ಹೆಸರುಗಳನ್ನೂ ಉಲ್ಲೇಖಿಸಿರುವದು ಕಂಡುಬರುವದು. ಆದರೆ ಅಂಥವ ರಲ್ಲಿ ಬಹು ಜನರ ಕೃತಿಗಳು ಉಪಲಬ್ಧವಿರುವದಿಲ್ಲ. ಅಲ್ಲದೆ ಅವರ ವಿಷಯವಾಗಿ ಅವರ ಹೆಸರ ನ್ನುಳಿದು ಇನ್ನಾವ ವಿವರವೂ ದೊರೆಯುವದಿಲ್ಲ. ಶಾಸನಗಳಲ್ಲಿಯೂ ಇಂಥ ಕೆಲವು ಕವಿಗಳ ಹೆಸರುಗಳು ಮತ್ತು ಅವರ ರಚನೆಗಳೂ ದೊರೆಯುತ್ತವೆ. ಇಂಥವರು ಸಾಮಾನ್ಯವಾಗಿ ಸಾಹಿತ್ಯ ಚರಿತ್ರೆಕಾರರ ಗಮನಕ್ಕೆ ಬಂದಿರುವದಿಲ್ಲ. ಅಂಥ ಕೆಲ ಕವಿಗಳ ವಿಷಯವಾಗಿ ತಿಳಿದಷ್ಟು ವಿವರ ಗಳನ್ನು ಕೊಡುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ಮಾದರಿಗೆಂದು ಅವರಿಂದ ರಚಿತವಾದ ಕೆಲವು ಪದ್ಯಗಳನ್ನೂ ಉದಾಹರಿಸಲಾಗಿದೆ.

೧ ದಕ್ಷಿಣ ಭಾರತದ ಶಾಸನಗಳು. ಸಂಪುಟ ೯, ಭಾಗ ೧. ಸಂಖ್ಯೆ ೧೧೭.

೨ ಈ ವಿಷಯವಾಗಿ ವಿವರವಾದ ಚರ್ಚೆಯನ್ನು ಶ್ರೀ ದೇಸಾಯಿ ಪಂಡುರಂಗರಾಯರ ಲೇಖನ ದಲ್ಲಿ ನೋಡಬಹುದು. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂಪುಟ ೩೧, ಸಂಚಿಕೆ ೨, ಪುಟ ೩೦

೨

## ಕನ್ನಪಯ್ಯ: (ಕ್ರಿ. ಶ. ೧೦೭೧)

ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನಲ್ಲಿಯ ಸೊರಟೂರಿನ ಜೈನಬಸ್ತಿಯಲ್ಲಿ ಶಾಸನವೊಂದಿದೆ.[೧] ಅದನ್ನು ಬರೆದವನು **ಕನ್ನಪಯ್ಯ**ನೆಂಬವನೆಂದು ಅದರ ಕೊನೆಗಿರುವ "ಸರಸತರ ಮಾದುವೆಂದಕ್ಕರಿಗರಬ್ಬರ್ಣ್ಣಿಪಿನಮೀ ಶಾಸನಂ . . . ಮುತ್ತಿನ ಸರಿಗೆಯನನುಕರಿಸೆ.ಕನ್ನಪಯ್ಯಂ ಬರೆದಂ" ಎಂಬ ಸಾಲಿನಿಂದ ತಿಳಿದುಬರುತ್ತದೆ. ಚಾಳುಕ್ಯ ೨ನೇ ಸೋಮೇಶ್ವರನ ಆಳಿಕೆಯಲ್ಲಿ ಬರೆದ ಈ ಶಾಸನದ ಕಾಲ ಕ್ರಿ ಶ. ೧೦೭೧.

ಈ ಅರಸನ ಸಾಮಂತನಾದ ಗಂಗವಂಶದ ಬಲದೇವಯ್ಯನೆಂಬುವನು ಸೊರಟಪುರ (ಈಗಿನ ಸೊರಟೂರು) ದಲ್ಲಿಯ ಬಲದೇವ ಜಿನಾಲಯಕ್ಕೆ ಭೂಮಿಯನ್ನು ದತ್ತಿಯಾಗಿ ಕೊಟ್ಟನೆಂದೂ ಅದೇ ಊರಿನ ಇನ್ನೂರ್ವ್ವರು ಮಹಾಜನರು ಅದೇ ಜಿನಾಲಯಕ್ಕೆ ಬೇರೆಬೇರೆ ದಾನಗಳನ್ನು ಕೊಟ್ಟರೆಂದೂ ಅದರಲ್ಲಿ ಹೇಳಿದೆ. ಶಾಸನದಲ್ಲಿ ಬರುವ ಸೋಮೇಶ್ವರ, ಬಲದೇವಯ್ಯ, ಚಿತ್ರಕೂಟಾನ್ವಯ ಮೊದಲಾದುವುಗಳ ವರ್ಣನೆಗಳಿಂದ ಕನ್ನಪಯ್ಯನ ಕವಿತ್ವವನ್ನು ಕಂಡುಕೊಳ್ಳಬಹುದು. ಕನಕನಂದಿಯೆಂಬ ಜೈನ ಮುನಿಯ ವರ್ಣನೆಯ ಪದ್ಯದಿಂದ, ಇವನು ಸಂಸ್ಕೃತದಲ್ಲಿಯೂ ಕಾವ್ಯರಚನೆ ಮಾಡಬಲ್ಲವನಾಗಿದ್ದನೆಂದು ಕಂಡುಬರುವದು.

### ಭುವನೈಕಮಲ್ಲ

ವೃ॥ ಅಂಗವರಾಳ ಸಿಂಗಳಿಕ ಗೂರ್ಜ್ಜರ ಮಾಳವ ಚೇರಪಾಣ್ಡ್ಯ ಕಾ
ಳಿಂಗ ಖಸಾನ್ಧ್ರಯಾದವಮಹೀಭುಜ ಮೌಳಿ ಮಣಿಪ್ರಜ ಪ್ರಭಾ।
ಲಿಂಗಿತಪಾದಪೀಠನಮರೇಂದ್ರ ವಿಳಾಸನವಾಯ್ರ್ಯವೀರನು
ತ್ತುಂಗಯಶಂ ಸಮಸ್ತ ಭುವನಾಶ್ರಯನಾಹವಮಲ್ಲನನ್ದನ॥

ಜನನಾಥಂ ಭುವನೈಕಮಲ್ಲಮಹಿಪಂ ಚಾಳುಕ್ಯ ಮಾರ್ತ್ತಣ್ಡನಾ
ದಿ ನರೇಂದ್ರಪ್ರತಿಮಂ ಸ್ವಬಾಹುಬಳದಿಂ ಪೂರ್ವ್ವಾಪರಾದ್ರೀನ್ದ್ರ ಹ।
ಮ್ಮ್ಯರ್ನಗಾಧೀಶ್ವರಸೇತುಸೀಮೆಯನಿಸಿದ್ದೀ ಧಾತ್ರಿಯಿಂ ಕೂಡೆ ವೈ
ರಿನ್ರಿ೨(ನೃ)ಪಾಳರ್ಕ್ಕಳನಿಕ್ಕಿ ಸೌ (ಶೌ) ಯ್ರ್ಯ ಧನವೇಕಚ್ಛತ್ರದಿಂಮಾಡಿದಂ॥

### ಚಿತ್ರಕೂಟಾನ್ವಯ

ವೃ॥ ಇದು ಧರ್ಮ್ಮಾಮೃತ ಸಿಂಧು ಸಶ್ರುತಲತಾಸಂದೋಹ ಕನ್ದಂ ದಯಾ-
ನದಿಗುತ್ಪತ್ತಿಯ ಬೆಟ್ಟು ತತ್ವದ ತಪಸ್ಸಂಸಾರವಾರಾಸಿಗಿ।
ಕ್ಕಿದ ಚೈತ್ರಂ ತೊಡವಾರ್ಹತಕ್ಕೆನೆ ಜನಂ ಭೂಭಾಗದೊಳ್ಪೊಂಪುವೆ-
ತ್ತಿದು ಸೂರಸ್ಥಗಣಂ ಪ್ರಸಿದ್ಧ ಮದರೊಳ್ ಶ್ರೀ ಚಿತ್ರಕೂಟಾನ್ವಯಂ॥

---

೧ ಮುಂಬಯಿ ಕರ್ಣಾಟಕದ ಶಾಸನಗಳು ಸಂಪುಟ ೧, ಭಾಗ ೧, ಸಂಖ್ಯೆ ೧೧೧.

೨ ಶಾಸನವನ್ನು ಕಂಡರಿಸುವವನ ಅಜ್ಞಾನದಿಂದಾಗಿ ಅಲ್ಲಲ್ಲಿ ತಪ್ಪುಗಳು ಸಿಗುವದುಂಟು. ಅವುಗಳನ್ನು ( ) ಕಂಸಗಳಲ್ಲಿ ತಿದ್ದಲಾಗಿದೆ.

## ಕನಕನಂದಿ ಸೈದ್ಧಾಂತಿಕ

ಯಶಜ್ಯೋತ್ಸ್ನಾಸರನಿರ್ಮ್ಮಳದ್ಯುತಿರಳಂಕೃತಾಶಾಂಬರೋ
ಬುಧಪ್ರಮುದಕೃದ್ಗುಣಃ ಕುವಳಯ ಪ್ರಮೋದಪ್ರದಃ ।
ಜಯತ್ಯಧಿಕಜೈನ ಶಾಸನಪಯೋಧಿ ಸಂವರ್ದ್ಧನಃ
ಪ್ರಭೂತಗುಣದೀಧಿತಿಃ ಕನಕಣನ್ದಿ ಸೈದ್ಧಾನ್ತಿಕಃ ॥

## ನಾಗದೇವ (ಕ್ರಿ. ಶ. ೧೦೮೨)

ಚಾಳುಕ್ಯವಂಶದ ಅರಸು ತ್ರಿಭುವನಮಲ್ಲದೇವ (ಆರನೆಯ ವಿಕ್ರಮಾದಿತ್ಯ)ನ ಕಾಲದ ಎರಡು ಶಾಸನಗಳಿಂದ ಈ ಕವಿಯ ವಿಷಯ ತಿಳಿದುಬರುತ್ತದೆ. ಈ ಎರಡೂ ಶಾಸನಗಳು ಧಾರವಾಡ ಜಿಲ್ಲೆಯ ಕುರ್ತುಕೋಟಿ ಗ್ರಾಮದಲ್ಲಿ ದೊರೆತವುಗಳು.೧ ಇವುಗಳ ಕಾಲ ಅನುಕ್ರಮವಾಗಿ ಕ್ರಿ. ಶ. ೧೦೮೨ ಹಾಗೂ ೧೦೮೭. ಇವೆರಡೂ ಶಾಸನಗಳ ಕೊನೆಯ ಭಾಗದಲ್ಲಿ "ಅಂಬುಧಿಪರಿವೇಷ್ಟಿತ ವಸುಧಾಂಬಿಕೆಗೆ ಲಲಾಮವೆನಿಪ ವಿಪ್ರಗ್ರಾಮಂ **ಪೊಂಬೊಳಲ ನಾಗದೇವ** ಬುಧಂ ಬುಧತತಿ ಮೆಚ್ಚೆ ಕಾವ್ಯಮಂ ರಚಿಸಿದ" ಎಂದೂ ಇನ್ತೀ ಶಾಸನಗಬ್ಬಮನನ್ತು ವಿಚಾರಿಪೊಡೆ ವುಚಿತಮೆಂಬಂತಿರೆ ವಿಕ್ರಾನ್ತಧನಂ ಜಯ ಲಕ್ಷ್ಮೀಕಾನ್ತಂ **ಪೊಂಬೊಳಲ ನಾಗದೇವಂ** [ಪೇಳ್ದಂ]" ಎಂದೂ ಹೇಳಿದೆ. ಈ ಎರಡೂ ಶಾಸನಗಳಲ್ಲಿ ಈ ಸಾಲುಗಳ ನಂತರ "ಪರಹಿತರಿನ್ನೂರ್ವ್ವರ ಪದಸರಸೀರುಹಾಮೋದಮಧುಕರಂ ಶಿವಭಕ್ತಂ ಕರವತಿಶಯಮಾಗಿರೆ **ವಿಸ್ತರದಿಂ ಕುಳಕರಣಿ ಮಾಬಳಾರ್ಯ್ಯಂ** ಬರೆದಂ" ಎಂದಿದೆ. ಇದರಿಂದ ಈ ಎರಡೂ ಶಾಸನಗಳ ಕರ್ತೃವು ನಾಗದೇವನೆಂಬವನು ಹಾಗೂ ಅವನು ಪೊಂಬೊಳಲು ಅಂದರೆ ಈಗಿನ ಹೊಂಬಳದವನು ಎಂದು ಗೊತ್ತಾಗುತ್ತದೆ. ಕುಲಕರಣಿ ಮಾಬಳಾರ್ಯನು ನಾಗದೇವನ ಕಾವ್ಯವನ್ನು ಕಲ್ಲಿನ ಮೇಲೆ ಬರೆದವನಾಗಿರಲು ಸಾಕು.

ಇನ್ನು, ಇದೇ ಊರಿನಲ್ಲಿ ದೊರೆತ ಇನ್ನೊಂದು ಶಾಸನದಲ್ಲಿ,೨ ಮೇಲೆ ಉಲ್ಲೇಖಿಸಲಾದ "ಪರಹಿತರಿನ್ನೂರ್ವ್ವರ . . . . ಕುಲಕರಣಿ ಮಾಬಳಾರ್ಯ್ಯಂ ಬರೆದಂ" ಎಂಬ ಸಾಲು ಸಿಗುತ್ತದೆ. ಆದರೆ ಅದರಲ್ಲಿ ನಾಗದೇವನ ಹೆಸರಿರುವದಿಲ್ಲ. ಈ ಶಾಸನದ ಕಾಲವೂ ಕ್ರಿ. ಶ. ೧೦೮೭. ಈ ಶಾಸನದ ಕರ್ತೃವೂ ನಾಗದೇವನೇ ಇರಬೇಕೆಂದು ಊಹಿಸಲು ಸಾಧ್ಯವಿದೆ. ಯಾಕೆಂದರೆ ನಾಗದೇವನಿಂದ ಬರೆಯಲ್ಪಟ್ಟವುಗಳೆಂದು ಸ್ಪಷ್ಟವಾಗಿ ಹೇಳಲಾದ ಶಾಸನಗಳಲ್ಲಿ ಮಾಬಳಾರ್ಯನ ಬಗೆಗೆ ಬರುವ ಉಲ್ಲೇಖವೇ ಇಲ್ಲಿಯೂ ಬರುತ್ತದೆ. ಮಾಬಳಾರ್ಯನೇ ರಚಿಸಿದವನಾಗಿದ್ದರೆ ಅದನ್ನವನು ಬೇರೆ ರೀತಿಯಿಂದ ಹೇಳಿಕೊಳ್ಳಬಹುದಾಗಿದ್ದಿತು. ಆದ್ದರಿಂದ ಈ ಶಾಸನವನ್ನೂ ರಚಿಸಿದವನು ನಾಗದೇವನೇ. ಹಾಗೂ ಮಾಬಳಾರ್ಯನು ಮೇಲಿನ ಶಾಸನಗಳಂತೆ ಇದನ್ನೂ ಪ್ರತಿಮಾಡಿದವನು ಅಥವಾ ಕಲ್ಲಿನಮೇಲೆ ಮಾತ್ರ ಬರೆದವನು ಎಂದು ಊಹಿಸಬಹುದು. ಈ ಶಾಸನದಲ್ಲಿ ನಾಗದೇವನ ಹೆಸರು ಅದನ್ನು ಕಟೆದವನ ತಪ್ಪಿನಿಂದಾಗಿ ಉಳಿದುಹೋಗಿರಬೇಕಷ್ಟೇ.

ಈ ಮೂರೂ ಶಾಸನಗಳ ಕರ್ತೃವಾದ ನಾಗದೇವನು ಹೊಂಬಳದವನೆಂದಿಷ್ಟೇ ಅಲ್ಲದೆ ಬೇರಾವ ವಿವರಗಳೂ ಸಿಗುವದಿಲ್ಲ. ಇವನ ಕವಿತಾಸಾಮರ್ಥ್ಯವನ್ನು ಈ ಶಾಸನಗಳಲ್ಲಿ ಕಂಡುಬರುವ ಕೆಲವು ಪದ್ಯಗಳಿಂದ ಕಂಡುಕೊಳ್ಳಬಹುದು.

---

೧ ಮುಂಬಯಿ ಕರ್ನಾಟಕದ ಶಾಸನಗಳು; ಸಂ. ಭಾಗ ೨ ಸಂಖ್ಯೆ ೧೨೭ ಹಾಗೂ ೧೯೪.
೨ ಅದೇ ಸಂಖ್ಯೆ ೧೩೩.

ತ್ರೈಳೋಕ್ಯ ಮಲ್ಲವೀರನೊಳಂಬ ಪಲ್ಲವ ಪೆರ್ಮ್ಮಾಡಿ ಜಯಸಿಂಹನೆಂಬುವನ ದಂಡಾಧೀಶನಾದ **ವಾಮದೇವ**ನೆಂಬವನ ವರ್ಣನೆ :— (ಶಾಸನ ಸಂಖ್ಯೆ ೧೨೭)

ವೃ॥ ಮನಸಿಜನಿಕ್ಷು ಚಾಪಮೆನಿಸಿರ್ಪ್ಪತಿಮುಗ್ಧ ವಿದಗ್ಧ ಕಾಮಿನೀ -
ಜನತೆ ಮನೋಜರಾಜನಿ[ಭ]ನೆಂಬುದು ವಂದಿಜನಕ್ಕೆ ಸೂರ್ಯ್ಯನಂ ।
ದನನಿನನೂನ ದಾನಯುತನೆಂಬುದು ದುರ್ದ್ಧರ ವೀರವೈರಿ ಗಿಂ -
ದ್ರನ ಸುತನಿಂದಮತ್ಯಧಿಕನೆಂಬುದು ಧಾರಿಣಿ ವಾಮದೇವನ ॥

ವಾಮದೇವ ಕೆರೆಯೊಂದಕ್ಕೆ ಭೂಮಿಯನ್ನು ದತ್ತಿಯಾಗಿ ಬಿಡುತ್ತಾನೆ. ಅದರ ಹೆಸರು **ಕಡಲೆಗೆಱೆ.** ಅದರ ವರ್ಣನೆ :—

ವೃ॥ ಅತಿಮಧುರಂ ಪ್ರಸನ್ನಕವಿ ನಿರ್ಮ್ಮಿಸಿದುನ್ನತ ಕಾವ್ಯದನ್ತೆ ನಿ -
ರ್ವೃತಿಯುತಮೆಯ್ದೆ ಮೋಕ್ಷದವೊಲ್ಚಿತ್ತಜನಪ್ಪನ ಚಿತ್ತದನ್ತೆ ಸ ।
ನ್ತತಮತಿ ನಿರ್ಮ್ಮಳಂ ಪೆಜರನೆನ್ದು ಮಪೇಕ್ಷಸುತಿರ್ಪ್ಪನನ್ತೆ ತಾ -
ನತಿಲಘುವೆನ್ನದೀ ಚಣಕ ದದ್ಗ(ಧ್ಭ)ತಟಾಕಮನಾರೊ ಬಣ್ಣಿಸರ್ ॥

ಭಾವಿಸೆ ಮೂರ್ತಿ ಸೋಮಕಳೆಯನ್ದದೆ ಶೋಭಿಸುತಿರ್ಪ್ಪುದೀ ಜಗ -
ತ್ಪಾವನಮಂಬುಜೋದರ ನಿವಾಸಪಯೋನಿಧಿಯನ್ತೆ ತೀವಿ ಸೇ ।
ವ್ಯಾವಹಮಾಗಿ ರಂಜಿಪುದು ಜೀವನವಂ ನರಜೀವರಾಸಿಗ -
ಳ್ದೀವಿಪುದೆಂದಡುನ್ನತಿಯನಾರ್ಪ್ಪೊಗಳರ್ದ್ಧರಣೀತಳಾಗ್ರದೊಳ್ ॥

ಮೇಲೆ ನಿರ್ದೇಶಿಸಿದ ಕುರ್ತಕೋಟಿಯ ಶಾಸನದಲ್ಲಿ ಕುಱಿತಕೊಂಟೆಯ (ಈಗಿನ ಕುರ್ತುಕೋಟಿ) ನಾವಿದನಾದ ದಾಸನೆಂಬವನು ದಾಸೇಶ್ವರವೆಂಬ ಗುಡಿಯನ್ನು ಕಟ್ಟಿಸಿದನೆಂದೂ ಅದಕ್ಕೆ ಮೋರಿಯ ವಂಶಜರು ಹಾಗೂ ಕೊಣೆಯ ವಂಶಜರು ದಾನಗಳನ್ನು ಕೊಟ್ಟರೆಂದೂ ಹೇಳಲಾಗಿದೆ. ಈ ಶಾಸನದ ಬಹುಭಾಗವು ಪದ್ಯದಲ್ಲಿದ್ದು ಅವುಗಳಲ್ಲಿ ಕೆಲವನ್ನು ಇಲ್ಲಿ ಅವಗಾಹಿಸಬಹುದು.

## ವಿಕ್ರಮಾದಿತ್ಯನ ಶೌರ್ಯ

ಕಂ॥ ಅಡಿಗೆರಗಿ ತಮ್ಮುಪಾರ್ಜ್ಜಿಸಿ -
ದೊಡಮೆಗಳಂ ತಂದುಕೊಟ್ಟು ಶರಣಾರ್ತ್ಥಿಗಳಾ ।
ದಡೆ ಬಾಳ್ವರ ಹಿತವರ್ಗ್ಗಂ
ತೊಡದುರ್ಳಿವರೆ ಮುಳಿಯೆ ವಿಕ್ರಮಾದಿತ್ಯನೃಪಂ ॥

## ಕುಱಿತಕೊಂಟೆಯ ಇನ್ನೂರ್ವ್ವರು ಮಹಾಜನರು

ವೃ॥ ವಿದಿತಸ್ನಿರ್ತಿವಿದರ್ವ್ವಿನೂತವಿನಯಾಳಂಕಾರರತ್ನೋರ್ಜ್ಜಿತ -
ಮ್ಮರ್ದಮಾತ್ಸರ್ಯ್ಯ ವಿದೂರರಾದಿಪುರುಷಪ್ರಖ್ಯಾತಿಯನ್ತಾಳಿಯ ।
ಭ್ಯುದಯಕ್ಕಾಶ್ರಯಮಾದರಾವುದಜಿಳಂ ಧರ್ಮ್ಮಜ್ಞರಾಹಾರದಾ -
ನದ ಪೆಂಪಿಟ್ಟಳಮೆಂದುಮೀಕುಱಿತಕೊಂಟಿಗ್ರಾಮ[ದೊ]ಳು ದ್ವಿಜರು ॥

## ಮೋರಿಯವಂಶದ ರಾವದೇವ

ವೃ॥ ಶಿವಭಕ್ತಂ ಸ್ತ್ರೀಜನಕ್ಕಂಗಜನಸತಿವಧೂತ್ಯಜ್ಯನಂಹೋವಿದೂರಂ
ಭುವನಕ್ಕಾರಾಧ್ಯ ವಿಪ್ರೋತ್ತಮಕುಳತಿಳಕಂ ಸತ್ಯವಾರಾಸಿಯತ್ಯು ।
ಗ್ರವಿರೋಧಿಬ್ರಾತ ಸಂಹಾರಕ ಸುಭಟ ಶಿಖಾರತ್ನಮಾಗಿಳ್ದನೆನ್ದಿಂ–
ತವನೀಚಕ್ರಂ ಕರಂ ಕೀರ್ತ್ತಿಸುತಿರೆ ನೆಗರ್ದ್ದಂ ದೇವನಾ ರಾವದೇವ ॥

## ಗುಜ್ಜಗೇತ

ವೃ॥ ಧರ್ಮ್ಮದ ದಾನದಾರ್ಪ್ಪಿನ ತವರ್ಮ್ಮನೆ ಸರ್ವಜನೋಪಕಾರಿತ –
ಕ್ಕೊರ್ಮ್ಮೆಯ ಜನ್ಮಭೂಮಿ ಸುಭಟಾಗ್ರಣಿ ಮೋರಿಯ ವಂಶಮುಣ್ಡನಂ ।
ನಿರ್ಮ್ಮಳಮೊಪ್ಪುತಿರ್ಪ್ಪ ತಿಳಕಂ ಸಲೆ ಭಾವಿಸೆ ಗುಜ್ಜಗೇತನಿಂ
ಧಾರ್ಮ್ಮಿಕರಾರು ಮತ್ತುಳಿದರೆಂಬುದು ವಾರ್ದ್ಧಿಪರೀತ ಭೂತಳಂ ॥

ಮೇಲೆ ನಿರ್ದೇಶಿಸಿದ ಎರಡನೆಯ ಶಾಸನದಲ್ಲಿ, ಕುಱಿತಕೂಂಟಿಯ ಬೆಳ್ಕೆರೆಯ ಎಱಗನೆಂಬವನು ವಿಷ್ಣು ಹಾಗೂ ಸರಸ್ವತಿಯರ ಗುಡಿಗಳನ್ನೂ, ಕೆರೆಯೊಂದನ್ನೂ ಕಟ್ಟಿಸಿ ಅವುಗಳಿಗೆ ಕೆಲವು ಭೂಮಿಗಳನ್ನು ದತ್ತಿಯಾಗಿ ಬಿಟ್ಟನೆಂದು ಹೇಳಿದೆ. ಈ ಶಾಸನದ ಬಹುಭಾಗವೂ ಪದ್ಯದಲ್ಲಿದೆ.

## ಕುಱಿತಕೂಂಟಿಯ ವಿಪ್ರರು

ವೃ॥ ಗ್ರಾಮದ ಪೂರ್ವ್ವ ದಕ್ಷಿಣದಿಶಾ ಪ್ರವಿಭಾಗದ ಯಾಗಮಣ್ಡಪ –
ಸ್ತೋಮದ ಹೋಮಧೂಮದ ಕವಿಲ್ತೊಗೆ ಪೆರ್ಚ್ಚೆ ದಿಗನ್ತರಾಳದಿಂ ।
ವ್ಯೋಮಮನೆಯ್ದಿ ನೀಳ್ದೆಸೆವುದಬ್ಧಿನಿನಾದಮೆ ವೇದಘೋಷಮೆಂ –
ದೀ ಮಹಿ ಬಣ್ಣಿಕುಂ ಕುಱಿತಕೂಂಟಿಯ ವಿಪ್ರಜನಾಗ್ರಗಣ್ಯರ ॥

## ಬೆಳ್ಕೆರೆಯ ಎಱಗ

ಕಂ ॥ ಎಱಗಂ ಭಯಲೋಭದ್ವಯ –
ಕೆಱಗಂ ದುಶ್ಶೀಳದುಷ್ಟದುರ್ಜ್ಜನದ ।
ತ್ತೆಱಗಂ ಸಚ್ಚರಿತೇತ –
ರ್ಗ್ಗೆಱಿವಂ ಚಾರಿತ್ರ ಜಳಧಿ ಬೆಳ್ಕೆರೆಯೆಱಗ ॥

## ಮಲ್ಲ : (ಕ್ರಿ. ಶ. ೧೧೯೯)

ಗದಗ ತಾಲೂಕಿನ ಚಿಕ್ಕಹಂದಿಗೋಳದ ಹನುಮಂತದೇವರ ಗುಡಿಯಲ್ಲಿ ಶಾಸನವೊಂದಿದೆ. ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ಈ ಶಾಸನದಲ್ಲಿ ಆತನ ದಂಡಾಧೀಶನಾದ ಅನಂತಪಾಳನ ಹಾಗೂ ಅವನ ತಮ್ಮಂದಿರ ವರ್ಣನೆಯಿದೆ. ಅನಂತಪಾಳನ ತಮ್ಮಂದಿರಲ್ಲೊಬ್ಬನಾದ ಮಾಧವನು ಅನ್ಯತಟಾಕ (ಈಗಿನ ಅಣ್ಣಿಗೆರೆ)ದಲ್ಲಿ ದೇವಾಲಯ, ಸತ್ರ ಮೊದಲಾದವುಗಳನ್ನು ಕಟ್ಟಿಸಿದನೆಂದೂ, ಅವನ ಮಗ ಚಂದನು ಕಿರಿಯ ಪಂದಿಗೊಳ (ಈಗಿನ ಚಿಕ್ಕಹಂದಿಗೋಳ)ದಲ್ಲಿ ಕೆರೆಯೊಂದನ್ನೂ ಮಾಧವೇಶ್ವರ ದೇವಾಲಯವನ್ನೂ ಕಟ್ಟಿಸಿದನೆಂದೂ ಅದರಲ್ಲಿ ಹೇಳಿದೆ. ಕೊನೆಗೆ "ದ್ರುಹಿಣವಿನಿರ್ಮ್ಮಿತವೆನೆ ಬಾಣಗದ್ಯ[ವಾ]ಲಿಖಿತ ಪಿತಾಮಹನೆನ್ದೊರೆಯೊಳೊಪ್ಪಿ

ಹೆಲಹರ್ಣಶಂ ಬರೆದನೆನೆ . . . . ಯ ಮಲ್ಲಂ” ಎಂದಿದೆ. ಸಾಧಾರಣವಾಗಿ ಶಾಸನಗಳಲ್ಲಿ ‘ಬರೆದಂ’ ಎಂಬ ಪದ ಕಾವ್ಯವನ್ನು ರಚಿಸಿದ ಎಂಬ ಅರ್ಥದಲ್ಲಿ ಉಪಯೋಗವಾಗಿರುವದು ಕಂಡು ಬರುವದಿಲ್ಲ ಆ ಅರ್ಥವನ್ನು ಸೂಚಿಸಲು ‘ಪೇಳ್ದಂ’ ‘ವಿರಚಿಸಿದಂ’ ಎಂದು ಮುಂತಾದ ಪದಗಳನ್ನು ಉಪಯೋಗಿಸಿದುದು ಕಂಡುಬರುತ್ತದೆ. ‘ಬರೆದಂ’ ಎಂಬ ಪದ ಕಲ್ಲಿನಮೇಲೆ ಬರೆದ ಅಥವಾ ಕಟಿದ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಡುತ್ತದೆ. ಆದರೆ ಪ್ರಸ್ತುತ ಶಾಸನದಲ್ಲಿ ಅದನ್ನು ಬರೆದ ಮಲ್ಲನು ತನ್ನ ಗದ್ಯವನ್ನು ಬಾಣ ಗೆದ್ಯಕ್ಕೆ ಹೋಲಿಸಿಕೊಂಡಿರುವದರಿಂದ ಈ ಶಾಸನವನ್ನು ಅವನೇ ರಚಿಸಿರಬಹುದೆಂದು ಊಹಿಸಲವಕಾಶವಿದೆ. ಇವನ ಕಾವ್ಯ ಶೈಲಿಯನ್ನು ಈ ಕೆಳಗಿನ ಕೆಲವು ಪದ್ಯಗಳಿಂದ ಕಂಡುಕೊಳ್ಳಬಹುದು.

## ಅನಂತಪಾಳನ ಮಹಿಮೆ

ಕಂ ॥ ಎಱಗದ ಪರದೇಶಂಗಳ -
ನೆಱಗದ ದುರ್ಗ್ಗಂಗಳಂ ಸಮುಚ್ಚ್ರಂಗಳಂ ಬಿಡದಿ ।
ದ್ದೆಱಗದ ನೃಪರಂ ನಿಜಪತಿ
· ಗೆಱಗಿಸಿದನನನ್ತಪಾಳ ದಣ್ಡಾಧೀಶ ॥

ವೃ॥ ಗಗನತಳಂಬರಂ ನೆಗೆದ ದಾಳಿಯ ಧೂಳಿಗೆ ಬೆಚ್ಚಿದಾಳಿಗಂ
ತೆಗೆದು ವನಾನ್ತಮಂ ಪುಗೆ ಗುಹಾನ್ತರಮಂ ಪುಗೆ ಶೈಳಕುಂಜಮಂ ।
ಪುಗೆ ಪರಭೂಮಿಯಂ ಪುಗೆ ತಪೋವನಮಂ ಪುಗೆ ಸಿನ್ಧುಕೂಟಮಂ
ಪುಗೆ ಚಲನ್ತಗುಳ್ದ ಭುಜಗರ್ವ್ವಮನನ್ತಮನನ್ತಪಾಳನ ॥

ಮಾಧವನ ಮಗ **ಚಂದ – ಪ್ರತಿಕಣ್ಠಚನ್ದ**ನೆಂದೂ ಇವನ ಹೆಸರು. **ಈತನ ಮಹಿಮೆ :**

ವೃ॥ ಪಿರಿಯ ನಿಯೋಗದೊಳ್ನಡೆದೆನೆಂಬ ನಿಯೋಗಿಗಳೆಲ್ಲಮೆಲ್ಲಿಯುಂ
ಪಿರಿಯರೆನೆನ್ಸು ಪೆರ್ಮೆಗೆ ಕಡಂಗಿದೊಡಂ ಪ್ರತಿಕಣ್ಠಚನ್ದನಿಂ ।
ಪಿರಿಯರೆ ನೀತಿಮನ್ತರೆ ಮಹಾಮತಿಮನ್ತರೆ ಮಿಕ್ಕ ಪುಣ್ಯಮ -
ನ್ತರೆ ಸತಿ ಸತ್ಯಮನ್ತರೆ ಕರಂ ಗುಣಮನ್ತರೆ ಕಾನ್ತಿಮನ್ತರೇ ॥

ಪರಕಿಪೊಡೆಲ್ಲರಕ್ಕರಮುಮಕ್ಕರಮೇ ಪ್ರತಿಕಂಟಚನ್ದನ -
ಕ್ಕರಮೆ ನೆಗರ್ತ್ತೆಯಕ್ಕರಮನೇಕರುಮಂ ಪೊರೆವಕ್ಕರಂ ಮಹೀ ।
ಶ್ವರರ ಸಭಾನ್ತರಾಳಮನಳಂಕರಿಸುವಕ್ಕರಮೆನ್ತುಮಾಳ್ದನಂ
ಪಿರಿಯಡಗುನ್ತಿಯೊಳ್ನಿಲಿಸುವಕ್ಕರಮುಪ್ಪರವಟ್ಟದಕ್ಕರ ॥

## ಚಂದ್ರಭಟ್ಟ ಕವಿ (ಕ್ರಿ. ಶ. ೧೧೮೯)

ಗದಗ ತಾಲೂಕಿನಲ್ಲಿರುವ ಕೋಟ ಉಮಚಿಗಿ ಗ್ರಾಮದ ಸೋಮೇಶ್ವರ ದೇವಾಲಯದಲ್ಲಿ ಶಾಸನವೊಂದಿದೆ.೧ ಅದನ್ನು ಬರೆದವನು ‘ಚಂದ್ರಭಟ್ಟ ಕವಿ’ ಎಂಬದು ತಿಳಿದುಬರುತ್ತದೆ. ಆದರೆ ಈ ಶಾಸನದ ಬಹುಭಾಗವು ಅಳಿಸಿಹೋಗಿರುವದರಿಂದ ಕವಿಯ ವಿವರಗಳಾಗಲಿ ಅವನು ಬರೆದ ಪದ್ಯಗಳಾಗಲಿ ದೊರಕುವದಿಲ್ಲ. ಅದರ ಕೊನೆಯಲ್ಲಿ “ಚತುರಧಿಕ ಶತಧರಾಮರ . . . . .

೧ ಮುಂಬಯಿ ಕರ್ನಾಟಕದ ಶಾಸನಗಳು ಸಂಪುಟ ೧ ಭಾಗ ೨ ಸಂಖ್ಯೆ ೧೪೩.

[ತಿಶಯದಿಂ] ಚಂದ್ರಭಟ್ಟ ಕವಿ ವಿರಚಿಸಿದಂ" ಎಂಬಿಷ್ಟು ಮಾತ್ರ ಕಾಣಸಿಗುತ್ತದೆ. ಈ ಶಾಸನದ ಕಾಲ ಕ್ರಿ. ಶ. ೧೧೯೯. ಕಂದ ಹಾಗೂ ವೃತ್ತಗಳಲ್ಲಿ ರಚಿತವಾದ ಇದರಲ್ಲಿ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯ ಹಾಗೂ ಆತನ ಸಾಮಂತನಾದ ಅನಂತಪಾಳನನ್ನು ವರ್ಣಿಸಿದೆ. ಆದರೆ ಈ ವರ್ಣನೆ ಸಮಗ್ರವಾಗಿ ದೊರೆತಿಲ್ಲ.

ಈ ಚಂದ್ರಭಟ್ಟನೂ ರಾಜವಲ್ಲಭನಿಂದ ರಚಿತವಾದ ಹೊಟ್ಟೂರ ಶಾಸನ[೧] ವನ್ನು ತಿದ್ದಿದ ಚಂದ್ರಭಟ್ಟನೂ ಒಂದೇ ಆಗಿರಬಹುದೆಂದು ಶ್ರೀ ಎನ್. ಲಕ್ಷ್ಮಿನಾರಾಯಣರಾಯರು ಸೂಚಿಸುತ್ತಾರೆ.[೨] ಅಲ್ಲಿ ಅವನು 'ವಾಕ್ಪತಿ' ಎಂದು ಕರೆಯಲ್ಪಟ್ಟಿದ್ದಾನೆ.[೩]

## ಸಂಕಣ (ಕ್ರಿ. ಶ. ೧೧೨೪)

ಧಾರವಾಡ ಜಿಲ್ಹೆಯ ಮೂಡರಗಿ ಪೇರಾದಲ್ಲಿ ಆಲೂರು ಗ್ರಾಮದಲ್ಲಿರುವ ನಾಗೇಶ್ವರ ದೇವಾಲಯದಲ್ಲಿಯ ಒಂದು ಶಾಸನವನ್ನು[೪] ಸಂಕಣನೆಂಬ ಕವಿಯು ರಚಿಸಿದನೆಂದು ಗೊತ್ತಾಗುತ್ತದೆ. ಇವನು ಶಾಂಡಿಲ್ಯ ಗೋತ್ರದ ಕುಲಕರಣಿ ಬೆಟ್ಟಮಯ್ಯನ ಅಳಿಯನೆಂದು ಆ ಶಾಸನದಲ್ಲಿ ಹೇಳಲಾಗಿದೆ. ಅದರ ಕಾಲ ಕ್ರಿ. ಶ. ೧೧೨೪.

ಆರನೆಯ ವಿಕ್ರಮಾದಿತ್ಯನ ದಂಡನಾಯಕನಾದ ಸುರಿಗೆಯ ಹೆಮ್ಮಾಡಿ ದೇವನು ಮಾಳದಾಲೂರನ್ನು (ಇಂದಿನ ಆಲೂರು, ಈ ಶಾಸನವು ದೊರೆತ ಸ್ಥಳ) ಆಳುತ್ತಿದ್ದಾಗ, ಆತನ ಸೋದರ ಮಾವನಾದ ಸುರಿಗೆಯ ನಾಗರಸನು ಸತ್ರ, ಋಗ್ವೇದದ ಪಾಠಶಾಲೆ, ಮೊದಲಾದವುಗಳನ್ನು ನಡೆಸುವದಕ್ಕಾಗಿ ಭೂಮಿಯನ್ನು ದಾನವಾಗಿತ್ತನೆಂದು ಹೇಳುವದು ಈ ಶಾಸನದ ಉದ್ದೇಶ. ಈ ಕೆಳಗಿನ ಮಾದರಿಯ ಪದ್ಯಗಳಿಂದ ಸಂಕಣ ಕವಿಯ ಕಾವ್ಯ ಸಾಮರ್ಥ್ಯವನ್ನು ಅರಿಯಬಹುದು.

### ಕರ್ನಾಟಕ ಕುಳೇನ್ದು ಮಾದಿರಾಜ

ಕಂ ॥ ಮಾದಿಗೆ ಬುಧಜನ ಹೃದಯಾ -
ಹ್ಲಾದಿಗೆ ಕರ್ಪೂರರಚನ್ದನಾಗರುಋಶ್ರೀಣಾ ।
ಮೋದಿಗೆ ನುತಸರಳಕಳಾ -
ವೇದಿಗೆ ಸಮನೊಳರೆ ಸಕಳವಿಶ್ವಂಭರೆಯೊಳು ।

---

೧ ಎಪಿಗ್ರಾಫಿಯಾ ಇಂಡಿಕಾ ಸಂಪುಟ ೧೬ ಪುಟ ೮೨.

೨ ಮುಂಬಯಿ ಕರ್ನಾಟಕದ ಶಾಸನಗಳು ಸಂಪುಟ ೧ ಭಾಗ ೨, ಪ್ರಸ್ತಾವನೆ ಪುಟ ೫.

೩ ಕವಿಚರಿತೆಯಲ್ಲಿ ೧ನೇ ಸಂಪುಟದ ೧೪ನೇ ಪುಟದಲ್ಲಿ ಒಬ್ಬ ಚಂದ್ರಭಟ್ಟನ ಉಲ್ಲೇಖವಿದ್ದು ಅವನ ಕಾಲ ಸುಮಾರು ಕ್ರಿ. ಶ. ೧೧೫೦ ಎಂದು ಊಹಿಸಲಾಗಿದೆ. ಈ ಚಂದ್ರಭಟ್ಟನು ೯ನೇ ಅಥವಾ ೧೦ನೇ ಶತಮಾನದಲ್ಲಿಯೋ ಅಥವಾ ಅದಕ್ಕೂ ಹಿಂದೆಯೋ ಇದ್ದಿರಬಹುದೆಂದು ಶ್ರೀ ಮುಗುಳಿಯವರು ಅಭಿಪ್ರಾಯಪಡುತ್ತಾರೆ (ಕನ್ನಡ ಸಾಹಿತ್ಯ ಚರಿತ್ರೆ ಪುಟ ೨೦) ಹಾಗಿದ್ದಲ್ಲಿ ಕವಿಚರಿತ್ರೆಕಾರರು ಉಲ್ಲೇಖಿಸಿದ ಚಂದ್ರಭಟ್ಟನೂ ಕೋಟ ಉಮಚಿಗೆಯ ಚಂದ್ರಭಟ್ಟನೂ ಒಂದೇ ಆಗಿರಲಾರರು.

೪ ಮುಂಬಯಿ ಕರ್ನಾಟಕದ ಶಾಸನಗಳು ಸಂಪುಟ ೧ ಭಾಗ ೨, ಸಂಖ್ಯೆ ೧೬೩.

### ಆತನ ಮಗ ಪೆರ್ಮ್ಮಾಡಿ ದಂಡನಾಥ

ವೃ॥ ಸಿರಿ ಪೊಸಮುತ್ತಿನಕ್ಕಸರದಂದಿರೆ ವಾಣಿ ಲಲಾಮ ರೇಖೆಯು -
ನ್ತಿರೆ ಜಯಲಕ್ಷ್ಮಿ ರಕ್ಕೆವಣಿಯನ್ತಿರೆ ಪೇರುರದೊಳ್ಮೃಖಾಬ್ಜದೊ ।
ಳ್ಪರಮೆಸೆಯುತ್ತಮಿರ್ದ್ದ ಭುಜದಣ್ಡದೊಳಿನ್ತು ನೆಗರ್ತ್ತೆವೆತ್ತನು -
ರ್ಬ್ಬರೆಯೊಳಗಣ್ಯಪುಣ್ಯನಿಧಿ ಪೆರ್ಮ್ಮರಸಂ ಬುಧತಳ್ಪಭೂರುಹಂ॥

### ಅವನ ಸೋದರಮಾವ ನಾಗರಸ

ವೃ॥ ತೆನ್ನಯ ತಿಣ್ಪನೇಳ್ಗೆ ಪಡಿಗಟ್ಟಳೆಯಾದುದು ಮಂದರಕ್ಕೆ ತ!
ನ್ನುನ್ನತಿಮೇರುವಿಂಗೆ ಮಣಿಚೂಣಿಯಾದುದು ತನ್ನ ಮಿಕ್ಕ ದಾ । ೧
ನ(ಂ) ೨ ನ್ನವತಳ್ಪವಲ್ಲರಿಗೆ ಪೊಂಗುಡಿಯಾದುದು ತನ್ನ ಕೀರ್ತ್ತಿ ಕ-
ಯ್ಗನ್ನಡಿಯಾದುದುರ್ವ್ವಿಗೆನೆ ನಾಗರಸಂ ನೆಗರ್ದ್ದಂ ಧರಿತ್ರಿಯೊಳ್ ॥

## ಮಾಳದಾಲೂರ ಅಗ್ರಹಾರ

ವೃ॥ ಧರಣೀಕಾನ್ತೆಗೆ ಮಾಸವಾಡಿವಿಷಯಂ ಚಲ್ವಾಗಿ ಮಾಣಿಕ್ಯದಾ -
ಭರಣಂಬೊಲೆಸೆದಿಪ್ಪುದಾ ವಿಶ(ಷ)ಯದೊಳ್ತಾಂ ಮಾಳದಾಲೂರ್ದ್ಧರಾ ।
ಮರರಿನ್ನೂರ್ವ್ವರಿಗಗ್ರಹಾರಮದನೊಳ್ಪಿಂ ಮುನ್ನೆಬಿಟ್ಟಂ ನರೇ -
ಶ್ವರ ರತ್ನಂ ಜನಮೇಜಯಾಖ್ಯನೆನಲಿನ್ನೇ ವಣ್ಣಿಪಂ ಬಣ್ಣಿಪ॥

## ನಾಗಾರ್ಜುನ ಪಂಡಿತ (ಕ್ರಿ. ಶ. ೧೧೨೭)

ಧಾರವಾಡ ತಾಲೂಕಿನ ಮುಗದಗ್ರಾಮದಲ್ಲಿ ನಾಗಾರ್ಜುನ ಪಂಡಿತನು ಬರೆದ ಶಾಸನವೊಂದು ದೊರೆತಿದೆ.[೩] ಅದರ ಕೊನೆಗೆ "ನಾಗಾರ್ಜ್ಜುನ ಪಣ್ಡಿತರು ಪೇಳ್ದ ಕಬ್ಬಂಕಸರು ಕಲ್ಲಾದಿಯಾಗಿ ಕಲ್ಲೋರ್ಝುರ ಕೆಲಸ ಎಂದು ಹೇಳಿದೆ." ಆದರೆ ಕವಿಯ ಹೆಸರಿನ ಹೊರತಾಗಿ ಇನ್ನಾವ ವಿವರಗಳೂ ದೊರೆಯುವದಿಲ್ಲ. ಈ ಶಾಸನದ ಕಾಲ ಕ್ರಿ. ಶ. ೧೧೨೭ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಸಾಮಂತನಾದ ಬಮ್ಮರಸನು ತನ್ನ ತಂದೆ ಮಾರ್ತಾಂಡಯ್ಯನು ಕೆರೆ, ಸತ್ರಗಳಿಗೆ ಕೊಟ್ಟ ದಾನಗಳ ವಿಷಯವಾಗಿ ಶಾಸನವನ್ನು ಬರೆಯಿಸಿದನೆಂಬುದಾಗಿ ಇದರಲ್ಲಿ ಹೇಳಿದೆ. ಶಾಸನದ ಬಹುಭಾಗ ಅಳಿಸಿಹೋಗಿದ್ದರೂ ಉಳಿದ ಕೆಲವು ಪದ್ಯಗಳಿಂದ ನಾಗಾರ್ಜುನನ ಕವಿತ್ವ ಶಕ್ತಿಯನ್ನು ಕಂಡುಕೊಳ್ಳಬಹುದಾಗಿದೆ.

## ಸಾಮಂತ ಮಾರ್ತ್ತಂಡ

ವೃ॥ ಮದವದ್ವೈರಿಯನಟ್ಟಿ ಕೊಂದು ಸ(ಶ)ರಣೆಂದುದ್ಭೀತರಂ ಕಾದು ಬೇ -
ಡಿದ ನಾನಾವಿಧ ಯಾಚಕರ್ಗ್ಗೆ ಸಿರಿಯಂ ಸಾಲ್ವಂನೆಗಂ ಮಾಡಿ ಯ ।
ಗ್ಗದ ಕೀರ್ತ್ತ್ಯಂಗನೆ ಲೋಕದಲ್ಲೆಡೆಗಳೊಳ್ಗಂಗಾಂಗನಾಕಾರ ಸಂ -
ಪದಮಂ ತಾಳ್ದಿರೆ ಪೆಂಪುವೆತ್ತುವೆಸ[ರಂ ಸಾ]ಮನ್ತ ಮಾರ್ತ್ತಣ್ಡನ ॥

೧ ಈ ಚರಣದಲ್ಲಿ ಒಂದು ಅಕ್ಷರ ಕಡಿಮೆಯಿದೆ.

೨ ಈ ಅನುಸ್ವಾರ ಅವಶ್ಯವಿಲ್ಲ; ಬಹುಶಃ ಕಟೆಯುವವನ ತಪ್ಪಿನಿಂದ ಸೇರಿರಬೇಕು.

೩ ಮುಂಬಯಿ ಕರ್ನಾಟಕದ ಶಾಸನಗಳು ಸಂಪುಟ ೧, ಭಾಗ ೨ ಸಂಖ್ಯೆ ೧೭೭.

**ಅವನ ಸತಿ ಗೊಜ್ಜಿಯಕ್ಕ**

ವೃ॥ ಒದವಿದ ಸದ್ಗುಣಪ್ರಬಳ ಸಂಹತಿಯಿಂ ಬಗೆಯಲ್ಕೆ ಸೀತೆಯೆಂ -
ಬುದು ಗಿರಿಜಾತೆಯೆಂಬುದು ಸರಸ್ವತಿಯೆಂಬುದು ಕೊ(ಕು)ನ್ತಿ ಮ(ಮಾ)ದ್ರಿಯೆಂ ।
ಬುದು ಸಲೆಗಂಗೆಯೆಂಬುದು ಸುಳೋಚನೆಯೆಂಬುದು ಭೂಮಿದೇವಿ ಯೆಂ !
ಬುದುವುಶಾ(ಷಾ) ದೇವಿಯೆಂಬುದು ಘಟಾನ್ತಕಿಯೆಂಬುದು ಗೊಜ್ಜಿಯಕ್ಕನಂ ॥

**ಇವರ ಮಗ ನಾಕರಸ**

ವೃ॥ ಅರಿಸಾಮನ್ತರ ರಕ್ತಮೆಂಬ ನವಸನ್ಧ್ಯಾರಾಗಮುರ್ಬ್ಬೇಳೆ ಸಾ -
ಕ್ಷರನೀರೇಜವನಕ್ಕೆ ಪೊ . . . . . ಹರ್ಷಂ ಶಿಶ್ಟೇಷ್ಟಚಕ್ರಾಂಕ ಮಾ ।
ದರದಿಂ[ಪೊಂ]ದೆ ಮುಗುಂದಮೆಂಬುದಯುಶೈಳ ಸ್ಥಾನದೊಳ್ತೇಜ ಮಾ -
ಗಿರೆ ಚಲ್ವಾದುದು ನಾಕಿರಾಜವಿಭುವೆಂಬಾದಿತ್ಯ ನಿತ್ಯೋದಯಂ ॥

ಸಾಸನಮಾಗಿರೊಳ್ಸೆವ ಕಲ್ಲಿನ ಸಾಸನಮೊಂದಿದಲ್ತು ಕೇ -
ಳ್ವಾಸದ ಸಾಸನಂ ಜಯದ ಸಾಸನವಾಪ್ಪ್ರನಂ ಸಾಸನಂ ಗುಣೋ ।
ದ್ಭಾಸನ ಸಾಸನಂ ಸಿರಿಯ ಸಾಸನವೊಪ್ಪಿನ ಸಾಸನಾಳಿಯಿಂ
ಲೇಸನೆ ನಾಕಿರಾಜವಿಭು ಸಾಸನಕೋಟಿಮನೆಯ್ದೆ ತಾಳ್ದಿದಂ ॥

ಇವನ ತಮ್ಮನೇ **ಬಮ್ಮರಸ** ಈ ಶಾಸನವನ್ನು ಬರೆಯಿಸಿದವ:

ವೃ॥ ಸ್ಥಿರವೇ ಮೇರುನಗೇಂದ್ರದಿಂದಚಳಿತಂ ಗಂಭೀರನೇ ಕ್ಷೀರಸಾ -
ಗರದಿಂದಂ ಮಿಗಿಲತ್ಯಾಗೀವನೇ ಬಾಪ್ಪಮ್ಮಮ್ಮ ತಾನೀತನಿಂ ।
ಪರಿಯಂ ರೂಪಿಯೆ ಕಂತುವಿಂದಧಿಕೃತಂ ಸಾಮನ್ತರ (ರಾ) ಭೈರವಂ
ಪರನಾರೀಸುತ ನಮ್ಮ ಬಮ್ಮನದಟಂ ಚಾವುಂಡರಾಯಾತ್ಮಜಂ ॥

# “ಅತ್ತಿಗೆ”

ಸಾಹಿತ್ಯಪರಿಷತ್ತು ಕೈಕೊಂಡಿರುವ ಕನ್ನಡನಿಘಂಟಿನ ‘ ಮಾದರಿ ಪುಟ ’ಗಳಲ್ಲಿ ‘ಅತ್ತಿಗೆ’ ಎಂಬ ಶಬ್ದದ ಕೆಳಗೆ ಹೀಗೆ ಬರೆದಿದೆ :—

**ಅತ್ತಿಗೆ$_1$** (ನಾ) < ಅತ್ತಿಕಾ? (ಸಂ) ಅಣ್ಣನ ಹೆಂಡತಿ. ಮುನ್ನಿನ ಜನ್ಮಾಂತರದತ್ತಿಗೆಯಪ್ಪ ಪೆಣ್ಣರಿಯಿಂದಂ (ಪದ್ಮಾ ೧-೧೫. 900) ; ಅಣ್ಣ ತನ್ನಪನಾದರೆ ಅತ್ತಿಗೆ ತನ್ನವಳೆ (ಗಾ) ೩.

**ಅತ್ತಿಗೆ$_2$** (ನಾ) < ಅಟ್ಟಿಗೆ. ಪ್ರೀತಿಯುವಳು, ಇನಿಯಳು, ಹೆಂಡತಿ. ಈಗಳಬ್ಬೆಯೆಂದತ್ತಿಗೆಯೆಂಬ ಮಾತನೆನಗೇನೆನಲಕ್ಕುಮೆ ಪಂಕಜಾನನೇ (ಪಂಪಭಾ ೧-೬೫ 941) ; ಅಬ್ಬೆಯೆಂದತ್ತಿಗೆಯೆಂದೊಡೆ ನಾಲಗೆಯಾತನ ತಲೆ ಸಿಡಿಲ್ದು ಪಾಱಿಟ್ಟುಂ (ಶಾಂತಿಪು. ೬-೮೧)

ನಿಘಂಟಿನ ಸಂಪಾದಕರ ಪ್ರಾರ್ಥನೆಯಂತೆ ಅನೇಕ ವಿದ್ವಾಂಸರು ಮಾದರಿ ಪುಟಗಳನ್ನು ಪರಿಶೀಲಿಸಿ ತಮ್ಮ ಅಮೂಲ್ಯವಾದ ಸಲಹೆ ಸೂಚನೆಗಳನ್ನು ಕೊಟ್ಟಿದ್ದಾರೆ. ನಮಗೆ ಸುಪರಿಚಿತವಾದ, ನಿತ್ಯ ವ್ಯವಹಾರದಲ್ಲಿರುವ, ಅತ್ತಿಗೆ ಎಂಬಂಥ ಶಬ್ದದ ಸ್ವರೂಪ, ಸಂಬಂಧ, ಅರ್ಥ, ಚರಿತ್ರೆ ಮುಂತಾದವುಗಳ ವಿಚಾರವಾಗಿ ಎಷ್ಟು ಭಿನ್ನಾಭಿಪ್ರಾಯಗಳು ಬರಬಹುದು, ಎಷ್ಟು ಚರ್ಚೆಗೆ ಅವಕಾಶವಿದೆ, ಸಿದ್ಧಾಂತ ಮಾಡುವುದು ಎಷ್ಟು ಕಷ್ಟ ಎಂದು ತೋರಿಸಲು ಮುಂದೆ ಮೂವರು ವಿದ್ವಾಂಸರು ಈ ಸಂಬಂಧವಾಗಿ ಬರೆದಿರುವ ಲೇಖನಗಳನ್ನು ಕೊಟ್ಟಿದೆ. ಇವುಗಳಲ್ಲಿ ಶ್ರೀ ರಾ. ಅನಂತಕೃಷ್ಣ ಶರ್ಮರು ತಮ್ಮ ಅಭಿಪ್ರಾಯವನ್ನು ಅವರು ಸಂಪಾದಕರಿಗೆ ಬರೆದ ಒಂದು ಪತ್ರದಲ್ಲಿಯೂ, ಶ್ರೀ ಸೇಡಿಯಾಪು ಕೃಷ್ಣಭಟ್ಟರು ಇದೇ ವರ್ಷದ ಮಾರ್ಚಿ ತಿಂಗಳ ‘ ನವಭಾರತದ ’ದ ೨೬–೩೦ನೆಯ ತಾರೀಖಿನ ಸಂಚಿಕೆಗಳಲ್ಲಿಯೂ, ಶ್ರೀ ಕಡವ ಶಂಭುಶರ್ಮರು ಸಂಪಾದಕರಿಗೆ ಬರೆದು ಕಳುಹಿಸಿದ ಒಂದು ದೀರ್ಘ ವಿಮರ್ಶೆಯಲ್ಲಿಯೂ ತಿಳಿಯಪಡಿಸಿದ್ದಾರೆ. ಅವರೆಲ್ಲರ ಅಭಿಪ್ರಾಯಗಳನ್ನೂ ಒಂದುಕಡೆ ಕೊಟ್ಟರೆ ಅದೇ ಒಂದು ವಿದ್ವತ್ಪೂರ್ಣವಾದ ಲೇಖನವಾಗಿ ಈ ವಿಚಾರದಲ್ಲಿ ನಿರ್ಣಯಕ್ಕೆ ಬರಲು ಸಹಾಯವಾಗುವುದೆಂದು ಯೋಚಿಸಿ ಹೀಗೆ ಪ್ರಕಟಿಸಿದೆ. ಇವುಗಳನ್ನು ಹೀಗೆ ಪರಿಷತ್ಪತ್ರಿಕೆಯಲ್ಲಿ ಪ್ರಕಾಶಪಡಿಸಲು ಅನುಮತಿಯಿತ್ತ ಈ ವಿದ್ವಾಂಸರಿಗೆ ಪರಿಷತ್ತು ಕೃತಜ್ಞವಾಗಿದೆ.

## ೧. ಶ್ರೀ ಸೇಡಿಯಾಪು ಕೃಷ್ಣಭಟ್ಟರವರ ಲೇಖನ

ಮಾದರಿ ಪುಟಗಳಲ್ಲಿ ‘ ಅತ್ತಿಗೆ$_2$ ’ – ಎಂಬುದಕ್ಕೆ ಅಟ್ಟಿಗೆ ಎಂಬುದು ಮೂಲವಾಗಿ ತೋರಿಸಲಾಗಿದೆ ; ಮತ್ತು ಅದರ ಆಧಾರದಿಂದಲೆಂಬಂತೆ, “ ಪ್ರೀತಿಯುವಳು, ಇನಿಯಳು, ಹೆಂಡತಿ ” ಎಂಬ ಅರ್ಥಗಳನ್ನು ಕೊಡಲಾಗಿದೆ. ಈ ‘ ಅಟ್ಟಿಗೆ ’ ಎಂಬ ಶಬ್ದವು ಹೆಂಡತಿ ಎಂಬ ಅರ್ಥದಲ್ಲಿ ಕನ್ನಡದಲ್ಲಿ ಎಲ್ಲಿಯಾದರೂ ರೂಢವಾಗಿದೆಯೇ ? ಅಥವಾ ಇದು ಪಂಪಭಾರತ, ಶಾಂತಿ ಪುರಾಣಗಳಲ್ಲಿ ಕಾಣುವ ‘ ಅತ್ತಿಗೆ ’ ಎಂಬ ಶಬ್ದಕ್ಕೆ ಅರ್ಥಸಾಮಂಜಸ್ಯವನ್ನು ಹುಡುಕುತ್ತಾ, “ ಅಟ್ಟು = ಪ್ರೀತಿ ; ಅಟ್ಟು + ಗ = ಪ್ರಿಯ, ಅದರ ಸ್ತ್ರೀರೂಪ

ಅಟ್ಟಿಗೆ"– ಹೀಗಿದ್ದಿರಬಹುದೆಂದು ಸಂಭಾವಿಸಿದ ಶಬ್ದವೆ? ಈ ಎರಡರೊಳಗೆ ಮೊದಲನೆಯು ದಾಗಿದ್ದರೆ ಮಾತ್ರ ಎಂದರೆ, ಹಳೆಯ ಸಾಹಿತ್ಯದಲ್ಲಿ ಎಲ್ಲಿಯಾದರೂ ಹೆಂಡತಿ ಎಂಬ ಅರ್ಥ ದಲ್ಲಿ 'ಅಟ್ಟಿಗೆ' ಎಂಬ ಪ್ರಯೋಗ ಕಂಡುಬರುವುದಾದರೆ ಮಾತ್ರ ಇಲ್ಲಿ ಇದನ್ನು ಹಾಕಿ ದುದು ಸರಿಯೆಂದು ಒಂದುವೇಳೆ ಹೇಳಿದರೂ ಹೇಳಬಹುದು. ಅಂತಹ ಸಂಭವದಲ್ಲೂ ಅದರ ಹಿಂದೆ, 'ಅತ್ತಿಗ್ಗೆ' ಎಂಬುದರ ಮೂಲವೆಂದು ಕೊಟ್ಟ 'ಅತ್ತಿಕಾ' ಎಂಬಲ್ಲಿ ಹಾಕಿದಂತೆ ಒಂದು ಪ್ರಶ್ನ ಚಿಹ್ನವು ಅವಶ್ಯ. ಆದರೆ 'ಅಟ್ಟಿಗೆ' ಎಂಬುದು ಸಂಭಾ ವಿಸಿದ ಶಬ್ದವಾಗಿದ್ದರೆ ಇಲ್ಲಿ 'ಅತ್ತಿಗ್ಗೆ' ಎಂಬುದರ ಮೂಲವಾಗಿ ಅದನ್ನು ತೋರಿಸಿ ದುದು ಎಂದೂ ಸಮಂಜಸವೆಂದಾಗಲಾರದು.

ಪಂಪ ಪೊನ್ನರು ಪ್ರಯೋಗಿಸಿದ ಅತ್ತಿಗೆ ಎಂಬ ಸಂಬಂಧ ವಾಚಕಕ್ಕೆ ಯಾವುದು ಮೂಲವಾಗಿರಬಹುದು ?

'ಅತ್ತಿಗ್ಗೆ$_1$' ಎಂಬುದಕ್ಕೆ 'ಅಣ್ಣನ ಹೆಂಡತಿ' ಎಂಬ ಒಂದೇ ಅರ್ಥವು ಮಾದರಿ ಪುಟಗಳಲ್ಲಿ ಕೊಡಲ್ಪಟ್ಟಿದೆ. ದಕ್ಷಿಣ ಕನ್ನಡದ ಆಡುಮಾತಿನಲ್ಲಿ, ಕನ್ನಡವೇ ಮನೆ ಮಾತಾಗಿರುವ ಕನ್ನಡಿಗರ ನುಡಿಯಲ್ಲಿ, ಅತ್ತಿಗೆ ಎಂಬ ಶಬ್ದಕ್ಕೆ 'ಅಣ್ಣನ ಹೆಂಡತಿ' ಎಂಬ ಒಂದೇ ಅರ್ಥವು ಇರುವುದಲ್ಲ; ಸೋದರತ್ತೆಯ ಮಗಳು, ಸೋದರಮಾವನ ಮಗಳು, ಗಂಡನ ಅಕ್ಕ, ಹೆಂಡತಿಯ ಅಕ್ಕ – ಎಂಬ ಅರ್ಥಗಳೂ ಆ ಶಬ್ದಕ್ಕೆ ಇವೆ. ಮತ್ತು 'ಅತ್ತೆ' ಎಂಬ ಶಬ್ದವು ಇವರೆಲ್ಲರ ತಾಯಂದಿರಿಗೂ ಸಲ್ಲುತ್ತದೆ. ತಮಿಳರಲ್ಲಿ ಸೋದರತ್ತೆಗೆ ಮಾತ್ರ ಅತ್ತೆ (ಅತ್ತೈ) ಎಂಬ ಹೆಸರು ಸಲ್ಲುವುದೆಂದೂ, ಸೋದರತ್ತೆಯ ಮಗನನ್ನು ಮಾತ್ರ 'ಅತ್ತಾನ್' ಎಂದೂ ಸೋದರತ್ತೆಯ ಮಗಳನ್ನು ಮಾತ್ರ 'ಅತ್ತಂಗಾರ್' ಎಂದೂ ಅವರು ಕರೆಯುತ್ತಾರೆಂಬುದೂ ತಿಳಿದುಬರುತ್ತದೆ. ಅತ್ತಾನ್ ಮತ್ತು ಅತ್ತಂಗಾರ್ ಎಂಬ ಶಬ್ದಗಳು, ಅತ್ತೆಯ ಮಗ ಮತ್ತು ಅತ್ತೆಯ ಮಗಳು ಎಂಬರ್ಥಗಳಲ್ಲಿ, ಅತ್ತೆ ಎಂಬ ಶಬ್ದ ದಿಂದಲೇ ಉಂಟಾದುವೆಂಬುದು ನಿಸ್ಸಂಶಯವೆನ್ನಬಹುದು; ಹಾಗೆಯೇ ಕನ್ನಡದ ಅತ್ತಿಗೆ ಎಂಬುದೂ ಅತ್ತೆ ಎಂಬುದರಿಂದಲೇ ಅತ್ತೆಯ ಮಗಳು ಎಂಬರ್ಥದಲ್ಲಿ, ಹುಟ್ಟಿದುದಾಗಿರ ಬೇಕು. ಈ ಸಂದರ್ಭದಲ್ಲಿ ತಮಿಳು ಕನ್ನಡಗಳೊಳಗೆ ಕಾಣುವ ಭೇದವೆಂದರೆ, ತಮಿಳಿನಲ್ಲಿ ಅತ್ತೈ ಮತ್ತು ಅತ್ತಂಗಾರ್ ಎಂಬ ಶಬ್ದಗಳು ಸೋದರತ್ತೆ ಹಾಗೂ ಸೋದರತ್ತೆಯ ಮಗಳು ಎಂಬರ್ಥಗಳನ್ನು ಮಾತ್ರ ಕೊಡುತ್ತವೆ; ಕನ್ನಡದ ಅತ್ತೆ ಅತ್ತಿಗೆಗಳೆರಡೂ ವಿಶಾಲಾರ್ಥವನ್ನು ಪಡೆದಿವೆ, ಇಷ್ಟೆ. ಈ 'ಅತ್ತೆ' ಎಂಬ ಶಬ್ದವು ಮೂಲತಃ ಸಂಸ್ಕೃತವೋ ದ್ರಾವಿಡವೋ ಎಂದು ನಿಶ್ಚಿತವಾಗಿ ಹೇಳುವುದು ಕಷ್ಟ. ಒಂದುವೇಳೆ ಅದು ಸಂಸ್ಕೃತ ಮೂಲವೆಂದೇ ಆದರೂ, 'ಅತ್ತಾ' ಎಂಬುದಕ್ಕೆ ಸಂಸ್ಕೃತದಲ್ಲಿ ತಾಯಿ ಎಂಬರ್ಥವಾದರೆ, 'ಅತ್ತಿಕಾ' ಎಂಬುದಕ್ಕೆ ಅಕ್ಕ ಎಂದರೆ ಅವಳ ಮಗಳು ಎಂದೇ ಅರ್ಥವಿದೆ. ಹೀಗೆ ಅತ್ತೈ – ಅತ್ತಂಗಾರ್, ಅತ್ತೆ – ಅತ್ತಿಗೆ, ಅತ್ತಾ – ಅತ್ತಿಕಾ ಎಂಬೀ ದ್ವಂದ್ವಗಳೊಳಗೆ ಅರ್ಥದಲ್ಲಿಯೂ ಶಬ್ದರೂಪದಲ್ಲಿಯೂ ತಾಯಿ – ಮಗಳ ಸಂಬಂಧವು ಎಂದರೆ ಜನಕ – ಜನ್ಯ ಭಾವವು ಸ್ಪಷ್ಟವಾಗಿ ಕಾಣುತ್ತದೆ. ಆದುದರಿಂದ ಅತ್ತಿಗೆ ಎಂಬ ಶಬ್ದದ ವ್ಯುತ್ಪತ್ತಿ ಯನ್ನು ಅತ್ತೆ ಎಂಬ ಶಬ್ದವನ್ನು ಹಿಡಿದೇ ಹೇಳಬೇಕಾಗುತ್ತದೆ.

ಹೀಗೆ ಸಿದ್ಧವಾದ 'ಅತ್ತಿಗೆ' ಎಂಬ ಶಬ್ದಕ್ಕೆ ಹಿಂದೆ ತಿಳಿಸಿದ ಪರಂಪರಾಗತವಾದ ಕನ್ನಡದ ಆಡು ನುಡಿಯ ಎಲ್ಲಾ ಅರ್ಥಗಳನ್ನು ಅನ್ವಯಿಸಿದರೆ, ಪಂಪಭಾರತ

ಶಾಂತಿ ಪುರಾಣಗಳಲ್ಲಿ ಕಾಣುವ 'ಅತ್ತಿಗೆ' ಎಂಬ ಶಬ್ದಕ್ಕೂ ಸಮಂಜಸವಾದ ಅರ್ಥವು ತೋರುತ್ತದೆ. ಹೇಗೆಂದರೆ—

ಕನ್ನಡ ನಾಡಿನಲ್ಲಿ, ದಕ್ಷಿಣ ಭಾರತದಲ್ಲೆಲ್ಲ, ಸೋದರತ್ತೆಯ ಮಗಳನ್ನೂ ಸೋದರ ಮಾವನ ಮಗಳನ್ನೂ ಎಂದರೆ 'ಅತ್ತಿಗೆ' ಯನ್ನು ಮದುವೆ ಮಾಡಿಕೊಳ್ಳುವುದು ಸಾಮಾನ್ಯ ರೂಢಿಯಷ್ಟೆ. ಎಂದರೆ 'ಸೊರೆ' ಯಲ್ಲಿ ಅತ್ತಿಗೆಯಾದವಳು ಹೆಂಡತಿಯಾಗಲು ತಕ್ಕವ ಳಾಗುತ್ತಾಳೆ. [ಈ 'ಸೊಱೆ' ಎಂಬ ಶಬ್ದವು ದಕ್ಷಿಣ ಕನ್ನಡ ಉತ್ತರ ಕನ್ನಡ ಜಿಲ್ಲೆ ಗಳಲ್ಲಿ ಬಹು ರೂಢವಾದ ಮಾತು. ಸಾಹಿತ್ಯದಲ್ಲಿ ಇದರ ಪ್ರಯೋಗ ಕಡಿಮೆ. ಪಂಪ ಭಾರತದಲ್ಲಿ ಇದು ಎರಡು ಕಡೆಗಳಲ್ಲಿ ಬಂದಿದೆ. (೧–೭೩ ಮತ್ತು ೨-೪೯) ಪೊನ್ನನ ಶಾಂತಿಪುರಾಣದಲ್ಲಿಯೂ ಬಂದಿದೆ. (೬–೮೭) ಆದರೆ ಅದು 'ಸೊರೆ' ಎಂದು ಅಲ್ಲಿ ಇದೆ. 'ಬಂಧು ಬಾಂಧವರೊಳಗಿರುವ ರಕ್ತಸಂಬಂಧ ಅಥವಾ ನಂಟು' ಎಂಬುದು ಇದರ ಅರ್ಥ. ಕರ್ನಾಟಕದ ಇತರ ಭಾಗಗಳಲ್ಲಿ 'ವಾವೆ' ಎಂಬ ಶಬ್ದವನ್ನು ಈ ಅರ್ಥದಲ್ಲಿ ಬಳಸುತ್ತಾರೆಂದು ತೋರುತ್ತದೆ. ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ ಪಂಪ ಭಾರತಕ್ಕೆ ಅನುಬಂಧಿಸಿರುವ ಕ್ಲಿಷ್ಟ ಶಬ್ದಗಳ ಕೋಶದಲ್ಲಿ ಸೊಱೆ ಎಂಬ ಶಬ್ದಕ್ಕೆ 'ಧರ್ಮ, ಕ್ರಮ, ನ್ಯಾಯ'– ಹೀಗೆ ಅರ್ಥ ಬರೆಯಲಾಗಿದೆ. ಈ ಸೊಱೆ ಎಂಬ ಶಬ್ದವು ಮೈಸೂರು ಕಡೆ ಪ್ರಾಯಃ ರೂಢವಾಗಿಲ್ಲವೆಂದು ತೋರುತ್ತದೆ. ಆದುದರಿಂದಲೇ ಈ ಶಬ್ದಕ್ಕೆ ಆ ರೀತಿ ಅರ್ಥಗಳು ಬಿದ್ದಿವೆಯೆನ್ನಬೇಕು.] ರಕ್ತ ಸಂಬಂಧಿಗಳೊಳಗೆ ಮದುವೆಯ ಮಾತೆತ್ತುವಾಗ ವಧೂವರರಾಗಲಿರುವವರ ಹಿಂದಿನ ಏಳು ತಲೆಗಳಿಂದ ಹಿಡಿದು 'ಸೊರೆ' ಯನ್ನು ಪರೀಕ್ಷಿ ಸುತ್ತಾರಷ್ಟೆ. (ಇದನ್ನು 'ಮರಾವಳಿ' ನೋಡುವುದು ಎನ್ನುತ್ತಾರೆ.) ಆಗ ಹುಡುಗನಿಗೆ ಹುಡುಗಿ ತಾಯಿಸೊರೆ ಅಥವಾ ತಂಗಿಸೊರೆಯಾದರೆ ಮದುವೆ ಕೂಡದು; ಅತ್ತೆಸೊರೆ ಯಾದರೆ ಸಾಮಾನ್ಯ; ಅತ್ತಿಗೆಸೊರೆಯಾದರೆ ಪ್ರಶಸ್ತ – ಹೀಗಿದೆ ಲೋಕರೂಢಿ. ಈ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡರೆ ಪಂಪಭಾರತ ಶಾಂತಿಪುರಾಣಗಳ 'ಅತ್ತಿಗೆ'ಗೆ ಸರಿಯಾದ ಅರ್ಥ ಹೊಳೆಯದಿರದು. "ಈಗಳಬ್ಬೆಯೆಂದತ್ತಿಗೆಯೆಂಬ ಮಾತನೆನಗೇನೆ ನಲಕ್ಕುಮೊ ಪಂಕಜಾನನೇ" ಎಂದರೆ, ಮೊದಲು ತಾಯಿಯೆಂಬ ಸೊರೆಯಲ್ಲಿ ಭಾವಿಸಿದ ನಿನ್ನನ್ನು ಈಗ ಅತ್ತಿಗೆ ಎಂಬ ಸೊರೆಯಲ್ಲಿ, ಎಂದರೆ ಮದುವೆಯಾಗಲು ತಕ್ಕವಳೆಂದು ಕಾಮಾಸಕ್ತಿಯಿಂದ ಭಾವಿಸುವುದು ಉಚಿತವೇ? – ಮೊದಲು 'ಅಬ್ಬೇ' ಎಂದು ಕರೆದು ಈಗ 'ಅತ್ತಿಗೆ' (ಎಂದರೆ ಅತ್ತೆಯ ಮಗಳೇ) ಎಂದು ಕರೆಯುವುದು ಸರಿಯೆ?– ಎಂಬ ರ್ಥವು ಸರಿಯಾಗಿ ನೂರಕ್ಕೆ ನೂರು ಕೂಡುತ್ತದೆ. ಶಬ್ದವ್ಯುತ್ಪತ್ತಿಯ ದೃಷ್ಟಿಯನ್ನು ಬದಿಗಿಟ್ಟು, ಕೇವಲ ಕಾವ್ಯದೃಷ್ಟಿಯಿಂದ ಭೀಷ್ಮನ ಮಾತನ್ನು ಪರೀಕ್ಷಿಸಿದರೂ, ಈ ಅರ್ಥದಲ್ಲಿರುವ ಉತ್ಕರ್ಷವು ಸಂಪಾದಕರು ಭಾವಿಸಿರಬಹುದಾದ ಆ ಇನ್ನೊಂದು ಅರ್ಥ ದಲ್ಲಿಲ್ಲ. "ಮೊದಲು ತಾಯಿ ಎಂದು ಹೇಳಿ ಈಗ ಹೆಂಡತಿ ಎಂದು ಹೇಗೆ ಹೇಳಲಿ" ಎಂದು ಭೀಷ್ಮನ ಬಾಯಿಂದ ವಾಚ್ಯವಾಗಿ ಹೇಳಿಸಿದರೆ ಆ ಮಾತಿನಲ್ಲಿ ಗ್ರಾಮ್ಯಚ್ಛಾಯೆ ಬೀಳ ದಿರದು. ಅಂಬೆಯೊಡನೆ ಸಾಲ್ವಲನು ಆಡಿದ "ಆನುಂ ಪೆಂಡತಿಯೆನಾದೆನದಱಿಂ ಪೆಂಡಿರ್ ಪೆಂಡಿರೊಳದೆಂತು ಕೂಡುವರಬಲೇ" ಎಂಬ ಲಜ್ಜೆಯಿಲ್ಲದ ಮಾತನ್ನೂ ಹಿಂದೆ ವಿವರಿಸಿ ದಂತಿರುವ ಭೀಷ್ಮನ ಉದಾತ್ತವಾದ ಮಾತನ್ನೂ ಹೋಲಿಸಿದರೆ, ಅವರಿಬ್ಬರ ಸ್ವಭಾವ ತಾರತಮ್ಯವನ್ನು ಕವಿ ಎಷ್ಟು ಜಾಣ್ಮೆಯಿಂದ ಕಾಣಿಸಿದ್ದಾನೆಂಬುದು ತಿಳಿಯುವುದು.

ಇನ್ನೊಂದೆಡೆಯಲ್ಲಿಯೂ ಇದೇ ರೀತಿಯ ಉದಾತ್ತವಾದ ಅರ್ಥವನ್ನು ಬರಿಯ 'ಮೊಱೆ' ಎಂಬುದನ್ನು ಮಾತ್ರ ಪ್ರಯೋಗಿಸಿ ಪಂಪನು ಭೀಷ್ಮನ ಬಾಯಿಂದಲೇ ವ್ಯಕ್ತಪಡಿಸಿದ್ದಾನೆ:—ಸತ್ಯವತಿಯನ್ನು ತಂದೆಗೆ ಮದುವೆ ಮಾಡಿಸುವ ಸಂದರ್ಭದಲ್ಲಿ (೧—೬೩) "ಈ ವಧುಗಾದ ಪುತ್ರರೊಳ್ ಕೂಡುಗೆ ರಾಜ್ಯಲಕ್ಷ್ಮಿ, ಮೊಱೆಯಲ್ತೆನಗಂತದು."– 'ರಾಜ್ಯ ಲಕ್ಷ್ಮಿ ಎನಗೆ ಮೊಱೆಯಲ್ತು' ಎಂದರೆ, ಈ ರಾಜ್ಯವೆಂಬ ಹೆಣ್ಣು ನನಗೆ 'ಮದುವೆಯಾಗುವ ಮೊರೆ' ಅಲ್ಲ. ಎಂದರೆ, ಅವಳಿಗೂ ನನಗೂ ಇರುವ 'ಮೊರೆ' ಅತ್ತಿಗೆ ಮೊರೆಯಲ್ಲ; ಅದು ತಾಯಿ ಮೊರೆ, ಅಥವಾ ತಂಗಿಮೊರೆ, ಎಂದು ತಿಳಿಯಿರಿ ಎಂದು ಸತ್ಯವತಿಯ ಹಿರಿಯರಿಗೆ ಮಾತು ಕೊಡುತ್ತಾನೆ. 'ಅತ್ತಿಗೆ' ಎಂಬುದು 'ಹೆಂಡತಿಯಾಗಬಹುದಾದ ಮೊರೆ' ಹೊರತು, ಹೆಂಡತಿಮೊರೆ ಅಲ್ಲ.

'ಅಬ್ಬೆಯೆಂದತ್ತಿಗೆಯೆಂಬ ಮಾತಂ' ಹೇಳಲಿಕ್ಕೆ ನನ್ನಿಂದಾದೀತೆ?–ಎಂದು ಭೀಷ್ಮನ ಬಾಯಿಯಿಂದ ಹೇಳಿಸಿದ ಪಂಪನು, ತನ್ನ ಕಾಲದಲ್ಲಿ ರೂಢವಾಗಿದ್ದೊಂದು ನಾಳ್ನುಡಿಯನ್ನೇ ಸಂದರ್ಭೋಚಿತವಾಗಿ ಅನುವಾದಿಸಿರಬಹುದೆಂಬ ಶಂಕೆಯನ್ನು ಆ ವಾಕ್ಯದಲ್ಲಿರುವ 'ಮಾತಂ' ಎಂಬ ಪದವು ಹುಟ್ಟಿಸುತ್ತದೆ. ಮತ್ತೆ, ಶಾಂತಿಪುರಾಣದಲ್ಲಿ ಪೊನ್ನನು ಇದನ್ನು ಪ್ರಯೋಗಿಸಿದ ಸಂದರ್ಭವನ್ನು ನೋಡಿದರೆ ಈ ವಿಷಯದಲ್ಲಿ ಸಂದೇಹವೇ ಉಳಿಯುವುದಿಲ್ಲ. ಮಾದರಿ ಪುಟಗಳಲ್ಲಿ ಅಪರ್ಯಾಪ್ತವಾಗಿ ಎತ್ತಿಕೊಂಡ ಆ ಭಾಗದ ಪೂರ್ಣ ರೂಪವಿದು:—ಒಡವುಟ್ಟಿದನರಸಿಯನೆ (ರೆ?) ನ್ನೊಡವುಟ್ಟಿದರೆನ್ನದಬ್ಬೆಯೆಂದತ್ತಿಗೆಯೆಂ। ದೊಡೆ ನಾಲಗೆಯಾತನ ತಲೆ ಸಿಡಿಲ್ದು ಪಾಱೇಟ್ಗೆಮೆನ್ನ ಪಾಱುಂಬಳಿಯೊಳ್ ॥— ಇದರ ಕಥಾ ಸಂದರ್ಭ ಹೀಗಿದೆ:–ಇಂದ್ರನೆಂಬ ರಾಜಕುಮಾರನಿಗೆ ಮದುವೆಯಾದ ಶ್ರೀಮತಿ ಎಂಬ ರಾಜಪುತ್ರಿಗೆ ಬಳಿವಳಿಯಾಗಿ ಬಂದ ವಸಂತಸೇನೆಯೆಂಬ ವೇಶ್ಯಾಕುಲದ ದಾಸಿಯೂ ಅರಮನೆ ಸೇರಿದ್ದಳು. ಅನ್ಯಾದೃಶ ಸುಂದರಿಯಾಗಿದ್ದ ಅವಳನ್ನು ಇಂದ್ರನು 'ನಿಧಿಯಂ ಕಂಡಂತೆ' ಕಂಡು, ಅವಳು ಇತರ ಪುರುಷರ ಕಣ್ಣಿಗೆ ಬೀಳದಂತೆ ಗೋಪ್ಯವಾಗಿ ಅಂತಃಪುರದ ಒಳಗಿಟ್ಟಿದ್ದನು. ಕೆಲವು ಕಾಲದ ಮೇಲೆ ಒಂದು ದಿನ ಇಂದ್ರನ ತಮ್ಮನಾದ ಉಪೇಂದ್ರನ ಕಣ್ಣಿಗೆ ಅವಳು ಹೇಗೋ ಬಿದ್ದಳು. ಅವನು ಕಾಮವಶನಾಗಿ ಅವಳನ್ನು ಕೂಡಿದನು. ಇದನ್ನು ತಿಳಿದ ಇಂದ್ರನು ಕ್ರೋಧೋದ್ರಿಕ್ತನಾಗಿ, ತಮ್ಮನನ್ನು ಕೊಲ್ಲದಿರೆನೆಂದು ಆವೇಶದಿಂದಾಡುವ ಮಾತುಗಳಲ್ಲಿ ಇದು ಒಂದು. ಇದರರ್ಥ ಹೀಗೆ:–"ಸಹೋದರನ ಹೆಂಡಿರು ನನ್ನ ಸಹೋದರಿಯರು" ಎಂದು ಹೇಳದೆ, ಯಾವನ ನಾಲಗೆಯು 'ಅಬ್ಬೆಯೆಂದತ್ತಿಗೆಯೆನ್ನು' ವುದೋ ಆತನ ತಲೆ ನನ್ನ ಚಕ್ರಾಯುಧದ ಹೊಡೆತದಿಂದ ಹಾರಿಹೋಗುವುದು–ಇಲ್ಲಿ 'ಅಬ್ಬೆಯೆಂದತ್ತಿಗೆಯೆನ್ನುವುದು'– ಎಂಬುದೊಂದು ನಾಳ್ನುಡಿ ಎಂಬುದು ಸ್ಪಷ್ಟ. ಇದು ನಾಳ್ನುಡಿಯಲ್ಲದಿದ್ದರೆ, ಈ ಸಂದರ್ಭದಲ್ಲಿ ಅತ್ತಿಗೆ ಎಂಬುದಕ್ಕೆ ಯಾವ ಅರ್ಥವನ್ನಿಟ್ಟುಕೊಂಡರೂ ಇಲ್ಲಿರುವ ಅಬ್ಬೆ ಎಂಬ ಶಬ್ದಕ್ಕೆ ಅರ್ಥವೇ ಇಲ್ಲವೆಂದಾಗುವುದು. 'ಮೊದಲು ತಾಯಿ! ಎಂದು ಹೇಳಿ ಮಗನಂತೆ ಸಮೀಪಗತನಾಗುವುದು; ಮತ್ತೆ ಅತ್ತೆಯ ಮಗಳೇ! ಎಂದು ಹೇಳತೊಡಗುವುದು' ಎಂಬುದು ಈ ಲೋಕೋಕ್ತಿಯ ತಾತ್ಪರ್ಯವಾಗಿ ತೋರುತ್ತದೆ. ಅತ್ತೆಯೆಂಬ ಹೆಸರು ಕನ್ನಡದಲ್ಲಿ ಹೆಂಡತಿಯ ತಾಯಿಗೂ ಸಲ್ಲುತ್ತದೆ. ಆದುದರಿಂದ ಯಾವಳೊಬ್ಬಳನ್ನು ಮದುವೆ ಮಾಡಿಕೊಂಡರೂ, ಮದುವೆಯಾದಮೇಲೆ ಅವಳು 'ಅತ್ತೆಯ ಮಗಳು' ಎಂದಾ

ಗುತ್ತಾಳೆ. ರೂಢಾರ್ಥದಲ್ಲಿ 'ಅತ್ತಿಗೆ' ಎಂದರೆ ಸೋದರಮಾವನ ಮಗಳೋ, ಸೋದರತ್ತೆಯ ಮಗಳೋ, ಅಣ್ಣನ ಹೆಂಡತಿಯೋ, ಹೆಂಡತಿಯ ಅಕ್ಕನೋ ಆಗಬಹುದಾದರೂ ಯೌಗಿಕವಾಗಿ ಅದಕ್ಕೆ ಹುಟ್ಟುವ ಅರ್ಥವು 'ಅತ್ತೆಯ ಮಗಳು' ಎಂದಿಷ್ಟೇ ಆಗಿದೆ. ಆದುದರಿಂದ ಈ ನಾಳ್ನುಡಿಯಲ್ಲಿ, ಅತ್ತಿಗೆ ಎಂಬ ಶಬ್ದದ ಯೋಗಾರ್ಥವನ್ನು ಅವಲಂಬಿಸಿದ ಕುತರ್ಕದ ಒಂದು ಗೂಢ ಧ್ವನಿ ಇದೆ. ಇದರಿಂದಾಗಿ ಅಗಮ್ಯಾಗಮನ ಪ್ರಯತ್ನ ಎಂಬ ಅಭಿಪ್ರಾಯವು ಅಗ್ರಾಮ್ಯವಾದ ಭಾಷೆಯಲ್ಲಿ ಈ ನಾಳ್ನುಡಿಯಿಂದ ಸೂಚಿತವಾಗುತ್ತದೆ. ಕೋಶ ಸಂಪಾದಕರ ಅಭಿಪ್ರಾಯವಾದರೂ ಈ ಸಂದರ್ಭದಲ್ಲಿ ಇದೇ ಆಗಿರಬಹುದೆಂದು ತೋರುತ್ತದೆ. ಆದರೆ ಅದಕ್ಕಾಗಿ ಅತ್ತಿಗೆ ಎಂಬ ಶಬ್ದಕ್ಕೆ ಹೆಂಡತಿ ಎಂಬ ಅರ್ಥವು ಇದ್ದಿರಬೇಕೆಂದು ಭಾವಿಸುವುದು ಅನವಶ್ಯ ಮಾತ್ರವಲ್ಲ, ವಾಸ್ತವವೂ ಅಲ್ಲ. ಹೆಂಡತಿ 'ಅತ್ತೆಯ ಮಗಳು' ಎಂದಾಗುವಳು ಹೊರತು, ಅತ್ತೆಯ ಮಗಳು ಎಂದರೆ ಹೆಂಡತಿಯಲ್ಲ. ಗಂಡನು 'ಮಾವನ ಮಗ' ನೆಂದಾಗುವನು, ಹೊರತು ಮಾವನ ಮಗ ಎಂಬುದೂ ಗಂಡ ಎಂಬುದೂ ಸಮಾನಾರ್ಥಕವಲ್ಲ.

ಮೇಲೆ ವಿವರಿಸಿದ ಶಾಂತಿಪುರಾಣದ ಸಂದರ್ಭವನ್ನು ಪರೀಕ್ಷಿಸಿದರೆ, ಅತ್ತಿಗೆ ಎಂಬ ಶಬ್ದಕ್ಕೆ ಅಂದೂ ಇದ್ದ ವಿಶಾಲಾರ್ಥವು ಗೋಚರಿಸುತ್ತದೆ. ಅತ್ತಿಗೆ ಎಂದರೆ 'ಅಣ್ಣನ ಹೆಂಡತಿ' ಎಂಬ ಸಂಕುಚಿತಾರ್ಥವು ಇಲ್ಲಿ ಹೊಂದಿಕೆಯಾಗುವುದೇ ಇಲ್ಲವಷ್ಟೆ. ಏಕೆಂದರೆ ಅಣ್ಣನೇ ಅಲ್ಲಿ ತನ್ನ ಸೂಳೆಯನ್ನು ತಮ್ಮನು ಮುಟ್ಟಿದನೆಂದು ಉರಿದೆದ್ದುದು. ಕೋಶ ಸಂಪಾದಕರ ಅಭಿಪ್ರಾಯದಂತೆ, ಅಣ್ಣನ ಹೆಂಡತಿ ಎಂಬರ್ಥದಲ್ಲಿ ಮಾತ್ರ ಒಂದು 'ಅತ್ತಿಗೆ' ಎಂಬ ಶಬ್ದರೂಪ; ತನ್ನ ಹೆಂಡತಿ ಎಂಬರ್ಥದಲ್ಲಿ 'ಅತ್ತಿಗೆ' ಎಂಬ ಇನ್ನೊಂದು ಅದೇ ರೂಪದ ಶಬ್ದ – ಹೀಗೆ ಏಕರೂಪಕ್ಕೆ ಪರಸ್ಪರ ಸಂಪೂರ್ಣ ಭಿನ್ನವಾದ, ಮತ್ತು ಈ ಸಂದರ್ಭದಲ್ಲಿ ಪ್ರಯೋಗಿಸಿದರೆ ರೂಪಸಾಮ್ಯದಿಂದಾಗಿ ಕೇವಲ ಹಾಸ್ಯಾಸ್ಪದವಾಗತಕ್ಕ ಎರಡು ಅರ್ಥಗಳು ಇರುತ್ತಿದ್ದ ಪಕ್ಷದಲ್ಲಿ, – ಕವಿಚಕ್ರವರ್ತಿ ಎನಿಸಿದ ಪೊನ್ನ ಮಹಾಕವಿ (ಸಂಪಾದಕರ ಅಭಿಪ್ರಾಯದಂತೆ, ಹೆಂಡತಿ ಎಂಬ ಅರ್ಥವಿರಬೇಕಾದಲ್ಲಿ) 'ಅತ್ತಿಗೆ' ಎಂಬ ರೂಪವನ್ನು ಸರ್ವಥಾ ಪ್ರಯೋಗಿಸದೆ, ಅದರ ಮೂಲವೆಂದು ಸಂಪಾದಕರು ಹೇಳುವ 'ಅಟ್ಟಿಗೆ' ಎಂಬ ರೂಪವನ್ನೇ ಪ್ರಯೋಗಿಸುತ್ತಿದ್ದನೆಂಬುದರಲ್ಲಿ ಸಂಶಯವಿಲ್ಲ. ಆದುದರಿಂದ, 'ಅತ್ತಿಗೆ' ಎಂದೊಡನೆ ಅಣ್ಣನ ಹೆಂಡತಿ ಎಂಬ ಸಂಕುಚಿತಾರ್ಥದಲ್ಲಿ ವಿರಮಿಸದ ತನ್ನ ಹೆಂಡತಿಯೆಂಬುದೂ ಅಲ್ಲದ, 'ಅತ್ತೆಯ ಮಗಳು' ಎಂಬ ವಿಶಾಲಾರ್ಥದಲ್ಲಿಯೇ ಇಲ್ಲಿ ಆ ಶಬ್ದವು ಪ್ರಯುಕ್ತವಾಗಿದೆಯೆಂಬುದು ಸ್ಪಷ್ಟವಾಗುತ್ತದೆ. ಇದರಿಂದ ಪಂಪ ಪೊನ್ನರ ಕಾಲದಲ್ಲಿ ಅದರ ಯೌಗಿಕವಾದ ಅರ್ಥವು ಕಣ್ಮರೆಯಾಗಿರಲಿಲ್ಲವೆಂದೂ ಗೊತ್ತಾಗುತ್ತದೆ.

ಶಾಂತಿ ಪುರಾಣದ ಅದೇ ಆಶ್ವಾಸದ ೮೭ನೆಯ ಪದ್ಯದಲ್ಲಿಯೂ ಅತ್ತಿಗೆ ಎಂಬ ಶಬ್ದವು ಬಂದಿದೆ. ಆ ಭಾಗ ಹೀಗಿದೆ: – ಮಗಳಕ್ಕಂ ತಂಗೆ ತಾಯ್ ನಾದಿನಿ ಸೊಸೆ ಮದವಳ್ ಅಜ್ಜಿ ಮುತ್ತಬ್ಬೆ ಮತ್ತ | ತ್ತಿಗೆ ಕೂಸಿತ್ತತ್ತೆಯೆಂಬೀ ಮೊರೆಯ ವನಿತೆಯರ್ . . . . . . || ಇಲ್ಲಿ ಗಂಡಿನ ನಾನಾ ಸ್ತ್ರೀ ಸಂಬಂಧ ವಾಚಕಗಳನ್ನು ಕವಿ ಸಂಗ್ರಹಿಸಿದ್ದಾನೆ. ಮೊಮ್ಮಗಳೆಂಬ ಒಂದನ್ನು ಬಿಟ್ಟು, ಪ್ರಾಯಃ ಗಂಡಿನ ಎಲ್ಲ ಹೆಣ್ಣು ಮೊರೆಗಳೂ ಇಲ್ಲಿ ಕಾಣುತ್ತವೆಯೆನ್ನಬಹುದು. ಮತ್ತು ಈ ಪದಗುಂಫನವನ್ನು ಪರೀಕ್ಷಿಸಿದರೆ

ದಂತೆಯೂ ಕಾಣುತ್ತದೆ: – ಮಗಳ್ ಅಕ್ಕಂ ತಂಗೆ ತಾಯ್; ನಾದಿನಿ ಸೊಸೆ ಮದವಳ್ (= ಹೆಂಡತಿ); ಅಜ್ಜಿ ಮುತ್ತಬ್ಬೆ; ಅತ್ತಿಗೆ ಅತ್ತೆ – ಹೀಗಿದೆ. ಇಲ್ಲಿ ಅತ್ತೆ ಎಂಬುದಕ್ಕೆ 'ಕೂಸಿತ್ತ' (= ಹೆಣ್ಣು ಕೊಟ್ಟ) ಎಂಬ ವಿಶೇಷಣವಿದ್ದು ಅದರ ಅರ್ಥ ಸಂಕುಚಿತವಾಗಿ, 'ಅತ್ತೆ' ಎಂಬುದಕ್ಕಿರುವ ವಿಶಾಲಾರ್ಥವನ್ನು ಅದು ಕೊಡದಿರುವುದಾದರೂ 'ಕೂಸಿತ್ತ ಅತ್ತೆ' ಎನ್ನುವ ಮಾತೇ, ಕೂಸು ಕೊಡದೆಯೂ 'ಅತ್ತೆ' ಎನ್ನಿಸಿಕೊಳ್ಳುವವರು ಎಂದರೆ ಸೋದರತ್ತೆ ಮೊದಲಾದವರು ಇರುವರೆಂಬುದನ್ನು ಕವಿ ತಿಳಿದೇ ಇರುವನೆಂಬುದಕ್ಕೆ ಸಾಕ್ಷಿಯಾಗಿದೆ. ಆದುದರಿಂದ ಕೇವಲ ಅತ್ತೆ ಎಂಬ ಶಬ್ದಕ್ಕೆ ಇಂದಿನ ಕನ್ನಡದಲ್ಲಿರುವಂತೆಯೇ, ಅಂದು ಕೂಡ ಸೋದರತ್ತೆ, ಸೋದರ ಮಾವನ ಹೆಂಡತಿ, ಹೆಂಡತಿಯ ತಾಯಿ ಇತ್ಯಾದಿ ಎಲ್ಲ ಅರ್ಥಗಳೂ ಇದ್ದಿರಲೇಬೇಕೆಂಬುದರಲ್ಲಿ ಸಂಶಯವಿಲ್ಲ. ಮತ್ತು ಅತ್ತಿಗೆ ಅತ್ತೆ ಎಂಬ ಶಬ್ದಗಳು ಒಟ್ಟಿಗೆ ಬಂದಿರುವುದು, ಅಂದು ಅತ್ತಿಗೆ ಎಂದರೆ ಅತ್ತೆಯ ಮಗಳು ಎಂಬರ್ಥವೇ ಇದ್ದಿತೆಂಬ ಪ್ರತಿಪಾದನವನ್ನು ಮತ್ತಷ್ಟು ರುಜುಪಡಿಸುವುದಾಗಿದೆ. ಮಗಳ್ ಅಕ್ಕಂ ತಂಗೆ ತಾಯ್ – ಇವು ಸಮೀಪತಮ ರಕ್ತ ಸಂಬಂಧಗಳು; ನಾದಿನಿ ಸೊಸೆ ಮದವಳ್ – ಇವು ಕೌಟುಂಬಿಕ ಸಂಬಂಧಗಳು; ಅಜ್ಜಿ ಮುತ್ತಬ್ಬೆ (ಅಜ್ಜಿ ಎಂದರೆ ಪಿತಾಮಹಿ ಎಂದೂ ಮುತ್ತಬ್ಬೆ ಎಂದರೆ ಮಾತಾಮಹಿ ಎಂದೂ ಅಂದಿನ ಕಾಲದಲ್ಲಿ ಅರ್ಥ ಭೇದವಿದ್ದಿರಬೇಕೆಂದು ತೋರುತ್ತದೆ)–ಇವು ಒಂದು ತಲೆ ದಾಟಿದ ರಕ್ತ ಸಂಬಂಧಗಳು; ಅತ್ತಿಗೆ ಅತ್ತೆ – ಇವು ರಕ್ತಸಂಬಂಧವೂ ಆಗಿರಬಹುದಾದ ಮತ್ತು ಕೌಟುಂಬಿಕವೂ ಆಗಿರಬಹುದಾದ ಸಂಬಂಧಗಳು– ಹೀಗೆ ವಿಭಾಗ ಕ್ರಮ ತೋರುವ ಈ ಗುಂಫನದಲ್ಲಿ ಕಾಣುವ 'ಅತ್ತಿಗೆ' ಎಂಬುದು ಅಣ್ಣನ ಹೆಂಡತಿ ಎಂಬರ್ಥವನ್ನು ಮಾತ್ರ ಕೊಡುವುದಾಗಿದ್ದರೆ ಅದು 'ನಾದಿನಿ ಸೊಸೆ ಮದವಳ್' ಎಂಬವುಗಳೊಡನೆ ಇರಬೇಕಾಗಿತ್ತು; ಅಥವಾ ಕೋಶ ಸಂಪಾದಕರು ಭಾವಿಸುವಂತೆ 'ಹೆಂಡತಿ' ಎಂಬರ್ಥವನ್ನು ಕೊಡುವ ಶಬ್ದವಾಗಿದ್ದರೂ ಅದು ಅವುಗಳೊಡನೆಯೇ ಇರಬೇಕಾಗಿತ್ತು. ಆದುದರಿಂದ, 'ಅತ್ತಿಗೆ' ಎಂಬುದಕ್ಕೆ 'ಅಣ್ಣನ ಹೆಂಡತಿ' ಎಂಬುದೊಂದೇ ಅರ್ಥವಲ್ಲ; 'ತನ್ನ ಹೆಂಡತಿ' ಎಂಬರ್ಥ ಅದಕ್ಕೆ ಸರ್ವಥಾ ಇಲ್ಲ: 'ಅತ್ತೆಯ ಮಗಳು' ಎಂಬುದೇ ಅದರ ನಿಜಾರ್ಥ – ಎಂಬುದು ನಿಸ್ಸಂದಿಗ್ಧವಾಗಿ ಸಿದ್ಧವಾಗುತ್ತದೆ.

## ೨. ಶ್ರೀ ಕಡವ ಶಂಭುಶರ್ಮರವರ ಲೇಖನ

**ಅತ್ತಿಗೆ.** < ಅತ್ತಿಕಾ (ಪ್ರಾ) ಎಂದೂ < ಅರ್ಥಿಕಾ (ಸಂ) ಎಂದೂ ಮೂಲ ಕಾಣಿಸಬೇಕು. ಜ್ಯೇಷ್ಠಭಗಿನಿ, ಹೆಂಡತಿ, ಅಣ್ಣನ ಹೆಂಡತಿ ಇತ್ಯಾದಿ ರೂಢಿಯ ಅರ್ಥಗಳನ್ನೆಲ್ಲಾ ಹೇಳಬಹುದು. ಸಮರ್ಥನೆ—

(ಮರುಮಕ್ಕತ್ತಾಯಂ) ಕ್ಷೇತ್ರಪ್ರಧಾನವಾಗಿರುವ— ಸ್ತ್ರೀಪ್ರಾಧಾನ್ಯವಿರುವ— ಪದ್ಧತಿಪ್ರಕಾರ ತಾಯಿಯ ಅನಂತರ ಮನೆಯ ಸರ್ವ ಸ್ವತ್ತುಗಳ ಅಧಿಕಾರಿಣಿಯು ಅಕ್ಕನೇ ಆಗುವ ಕಾರಣದಿಂದ ಜ್ಯೇಷ್ಠಭಗಿನಿಯನ್ನು ಅತ್ತಿಗೆ<ಅರ್ಥಿಕೆ ಎಂದು ಕರೆಯಲಾಗುವುದು.

ಅರ್ಥ ಶಬ್ದಕ್ಕೆ, ಸೊತ್ತು, ಧನ, ಹಣ, ಎಂದು ಅರ್ಥ. (ಸ್ವ+ಅರ್ಥ=ಸೊತ್ತು) ಅರ್ಥ ಶಬ್ದಕ್ಕೆ ಅಲ್ಪಾರ್ಥದಲ್ಲಿಯೋ ಸ್ವಾರ್ಥದಲ್ಲಿಯೋ ಕ ಪ್ರತ್ಯಯವು ಬಂದು ಸ್ತ್ರೀತ್ವ

ವಿವಕ್ಷೆಯಲ್ಲಿ ಟಾಪ್ ಪ್ರತ್ಯಯವು ಸೇರಿ ಅರ್ಥಿಕಾ ಎಂಬ ಶಬ್ದವಾಗುವುದು. ತದ್ಭವದಲ್ಲಿ ಲಿಂಗವಾಗುವಾಗ ಅತ್ತಿಗೆ ಎಂಬ ರೂಪವಾಗುವುದು.

"ಅರ್ಥಃ ಅಸ್ಯಾಃ ಅಸ್ತೀತಿ ಅರ್ಥಾ. ಅರ್ಥೈವ ಅರ್ಥಿಕಾ. ಸ್ವಾರ್ಥೇ ಅಲ್ಪಾರ್ಥೇ ವಾ ಕಃ." ಮನೆಯ ಧನಕ್ಕೆ ಅಧಿಕಾರಿಣಿ, ಸ್ವಾಮಿನಿ, ಒಡತಿ, ರಾಣಿ ಎಂಬ' ಅರ್ಥದಲ್ಲಿಯೂ, ಚಿಕ್ಕ ಒಡತಿ ಎಂಬ ಅರ್ಥದಲ್ಲಿಯೂ, ಮರುಮಕ್ಕತ್ತಾಯಂ ಪದ್ಧತಿಪ್ರಕಾರ ಹಿರಿಯ ಅಕ್ಕನು (=ಜ್ಯೇಷ್ಠಾ ಭಗಿನಿಯು) ಅತ್ತಿಗೆ ಎನಿಸುವುದೂ, "ಅತ್ತಿಕಾ ಭಗಿನೀ ಜ್ಯೇಷ್ಠಾ" ಎಂಬ ಅಮರಕೋಶದ ಅರ್ಥವೂ ಯುಕ್ತವಾಗಿದೆ ; ಸೋದರನು ಜ್ಯೇಷ್ಠಭಗಿನಿಯನ್ನು ಮನೆಯ ಧನದ ಅಧಿಕಾರಿಣಿ ಎಂಬ ಅರ್ಥದಲ್ಲಿ ಅತ್ತಿಕಾ ಎಂಬುದು ಯುಕ್ತ. (ಇದು ಕ್ಷೇತ್ರಪ್ರಧಾನ ದಕ್ಷಿಣದೇಶಾಚಾರ.) "ಭಗಿನೀ" ಎಂಬ ಶಬ್ದವೂ "ಭಗಃ=ಐಶ್ವರ್ಯಂ ಅಸ್ಯಾಃ ಅಸ್ತೀತಿ ಭಗಿನೀ" ಎಂಬ ನಿರ್ವಚನದಿಂದ "ಧನದ ಒಡತಿಯಾದವಳು" ಎಂಬ ಅರ್ಥದಲ್ಲಿಯೇ ಆಗಿದೆ. 'ಪ್ರಶಸ್ತ ಭಗವುಳ್ಳವಳು' "ಶ್ರೀಮತೀ" ಎಂಬುದೇ ಇದರ ಅರ್ಥ. (ಭಗಶಬ್ದದ ರೂಢಿಯ ಬೇರೆ ಅರ್ಥವು ಇಲ್ಲಿ ಗ್ರಾಹ್ಯವಲ್ಲ.) ದಕ್ಷಿಣದೇಶದ ಸ್ತ್ರೀಪ್ರಾಧಾನ್ಯ ಪದ್ಧತಿಗೆ ಅನುಸಾರವಾಗಿ ಅರ್ಥಿಕಾ ಅತ್ತಿಗೆ ಭಗಿನೀ ಶಬ್ದಗಳು ಧನಕ್ಕೆ ಒಡತಿ ಎಂಬ ಅರ್ಥದಲ್ಲಿಯೇ ಉಂಟಾಗಿವೆ. ಹೆಂಡತಿಯು ಗಂಡನ ತಾಯಿಯನ್ನು ಅತ್ತೆ ಎಂದು ಕರೆಯುವಳು. ತಾನಾಗಲೀ ತನ್ನ ಗಂಡನಾಗಲೀ ಈ ಮನೆಯ ಅರ್ಥದ ಒಡೆಯ ಒಡತಿಯಲ್ಲ, ಗಂಡನ ತಾಯಿಯೇ ಮನೆಯ ಒಡತಿ ಎಂದು ಸೂಚಿಸುವಂತೆ ಗಂಡನ ತಾಯಿಯನ್ನು ಸೊಸೆ ಅತ್ತೆ ಎಂದೇ ಕರೆಯುವಳು. "ಅರ್ಥಃ ಅಸ್ಯಾಃ ಅಸ್ತೀತಿ ಅರ್ಥಾ" ತದ್ಭವ—ಅತ್ತೆ.

ಗಂಡನ ಸೋದರಿಯನ್ನು ಅತ್ತಿಗೆ – ಅರ್ಥಿಕಾ – ಎಂದು ಕರೆಯುವುದೂ ಚಿಕ್ಕ ಮನೆಯ ಧನಾಧಿಕಾರಿಣಿ ಎಂಬ ಅರ್ಥದಲ್ಲಿ ಉಚಿತವಾಗಿಯೇ ಇದೆ. (ಅಣ್ಣನ ಹೆಂಡತಿ ಅತ್ತಿಗೆ.) ಇದು (ಮಕ್ಕಳ ಕಟ್ಟಿನ) ಬೀಜ ಪ್ರಧಾನ ಪದ್ಧತಿಯವರಲ್ಲಿಂದ ಬಂದ ಹೆಂಡತಿಯು ಗಂಡನ ಸೋದರಿಯರನ್ನು ಅತ್ತಿಗೆ ಎಂದೂ ಗಂಡನ ತಾಯಿಯನ್ನು ಅತ್ತೆ ಎಂದೂ ಹೇಳುವುದಾಗಿದೆ.

"ಅಹಿಚ್ಛತ್ರ ಬ್ರಾಹ್ಮಣಾಃ ಸುರಾಂ ಪಿಬಂತಿ ; ದಾಕ್ಷಿಣಾತ್ಯಾಃ ಬ್ರಾಹ್ಮಣಾಃ ಮಾತುಲಕನ್ಯಾಮುದ್ವಹಂತಿ" ಎಂದು ಕುಮಾರಿಲಭಟ್ಟನು ದಕ್ಷಿಣ ದೇಶದವರು ಸೋದರ ಮಾವನ ಮಗಳನ್ನು ಮದುವೆಯಾಗುವರು, ಅಹಿಚ್ಛತ್ರ ಬ್ರಾಹ್ಮಣರು ಹೆಂಡ ಕುಡಿಯುವರು ಎಂದು ಹೇಳಿದ್ದಾನೆ.

ಧ್ವನ್ಯಾಲೋಕಲೋಚನದಲ್ಲಿ "ಅತ್ತಾ = ಅತ್ತೆ ಇಲ್ಲಿ ಮಲಗುವಳು, ಮಾವನು ಕುರುಡನು, ಗಂಡನು ಪ್ರವಾಸದಲ್ಲಿದ್ದಾನೆ ಎಂಬ ಅರ್ಥದ ಗಾಥೆಯಲ್ಲಿ ಅತ್ತಾ ಶಬ್ದವನ್ನು ಶ್ವಶ್ರೂಃ ಎಂಬ ಅರ್ಥದಲ್ಲಿ ಪ್ರಾಕೃತದಲ್ಲಿ ಕಾಣಬಹುದು. ಅತ್ತಿಕಾ ಶಬ್ದವೂ ಪ್ರಾಕೃತವೇ ಆಗಿರಬೇಕು. ಇದು ನಾಟ್ಯೋಕ್ತಿಯಾದುದರಿಂದ ಪ್ರಾಕೃತವೆಂಬುದು ಸ್ಪಷ್ಟ. "ನಾಟ್ಯೋಕ್ತೌ ಗಣಿಕಾಜ್ಜುಕಾ". ತಂಗಿಯು ಅಕ್ಕನ ಮಗಳನ್ನು ಮದುವೆಯಾಗುವ ಕೆಲಕರ್ಣಾಟಕ ಬ್ರಾಹ್ಮಣರ, ದ್ರಾವಿಡರ, ತೌಳವ ಬ್ರಾಹ್ಮಣರ ಪದ್ಧತಿಯಂತೆ ಅಕ್ಕನ ಮಗಳನ್ನು ಮದುವೆಯಾದಮೇಲೆ ಅಕ್ಕನನ್ನೇ ಅತ್ತೆ ಎಂದು ಹೇಳಬೇಕಾಗುವುದಾದುದರಿಂದ ಅವಳ ಮಗಳು (ತನ್ನ ಹೆಂಡತಿ) ಅತ್ತಿಗೆ ಪ್ರಿಯೆಯಾಗುವುದನ್ನು ಸೂಚಿಸುವಂತೆ

ಜ್ಯೇಷ್ಠ ಭಗಿನಿಯನ್ನೆ ಅತ್ತಿಕಾ ಎಂದು ಹೇಳಿದುದಾಗಿ ಅಮರೋಕ್ತಿಯನ್ನು ತಿಳಿಯಲೂ ಬಹುದು. ಧನಾಧಿಕಾರಿಣಿ ಎಂಬ ಅರ್ಥದಿಂದಲೂ ಜ್ಯೇಷ್ಠೆ ಅತ್ತಿಗೆಯಾಗುವಳು. ಇಲ್ಲಿ ಸ್ವಾರ್ಥದಲ್ಲಿ ಕ ಪ್ರತ್ಯಯ.

ಪಾರ್ಸಿ ಜಾತಿಯವರ ಪದ್ಧತಿಯಂತೆ ಸೋದರಿಯನ್ನೇ ಹಕ್ಕಿನ ಪ್ರಕಾರ ಮದುವೆಯಾಗುವುದರಿಂದ ಅಮರಕೋಶೋಕ್ತಿಯಂತೆ ಸೋದರಿಯನ್ನೇ ಅತ್ತಿಗೆ ಎಂದೂ ಹೇಳಬಹುದಾಗಿದೆ. ಇಲ್ಲಿ ಪ್ರಿಯೆ ಎಂಬ ಅರ್ಥವೂ ಮನೆಯ ಒಡತಿ ಎಂಬ ಅರ್ಥವೂ ಒಪ್ಪುತ್ತದೆ.

ಅರ್ಥಶಬ್ದಕ್ಕೆ ಯಾಚನೆ ಎಂಬ ಅರ್ಥವನ್ನು ಇಟ್ಟುಕೊಂಡು ಕನ್ಯಾರ್ಥಿಯಾಗಿ ಯಾಚನೆಮಾಡಿ ತರಲ್ಪಟ್ಟವಳನ್ನು ಅರ್ಥಿಕಾ – ಅತ್ತಿಗೆ – ಪ್ರಿಯೆ ಎಂಬ ಅರ್ಥದಿಂದ ಅತ್ತಿಗೆ = ಪ್ರಿಯೆ ಎಂಬ ಅರ್ಥವೂ ಸಂಪಪ್ರಯೋಗಾನುಸಾರ ಆಗಬಹುದು. ಅರ್ಥ ಶಬ್ದಕ್ಕೆ ಪ್ರಿಯವೆಂಬ ಅರ್ಥವೂ ಇರುವುದರಿಂದ ಪ್ರೀತಿಗೆ ವಿಷಯವಾದವಳೂ ಅರ್ಥಿಕೆ, ಅಟ್ಟಿಗೆ, ಅರ್ತಿಗೆ, ಅತ್ತಿಗೆ ಎಂಬ ರೂಪವನ್ನು ಪಡೆದು, ಪ್ರಿಯೆ ಎಂಬ ಅರ್ಥವನ್ನು ಹೊಂದಬಹುದು. ಪ್ರಿಯೆ ಎಂಬ ಅರ್ಥದಲ್ಲಿ ಮೂಲ ಕಾಣಿಸುವುದಿದ್ದರೆ—

ಅತ್ತಿಗೆ < ಅರ್ತಿಕೆ < ಅಟ್ಟಿಗೆ < ಅರ್ಥಿಕಾ. (ಸಂ) ಎಂದು ಕಾಣಿಸಬೇಕು. ಅರ್ಥಿ ಶಬ್ದವೇ ಅಟ್ಟಿ ಎಂದು ತದ್ಭವವಾಗಿವೆ. ಪ್ರೀತಿ ಎಂಬ ಅರ್ಥವು ಅರ್ಥಶಬ್ದಕ್ಕೆ ನಾನಾರ್ಥವಿರುವುದರಿಂದ ಸಮಂಜಸವಾಗುವುದು. ಪ್ರಿಯಾರ್ಥವನ್ನೇ ಇಟ್ಟುಕೊಂಡು ಅರ್ಥಾ > ಅತ್ತೆ < ಅಟ್ಟೆ = ಅತ್ತೆ.—ಅರ್ತಿ ಎಂಬ ಶಬ್ದಗಳಾದುವೆಂದು ಹೇಳಬಹುದು.

ಅರ್ಥಿ: ಶಬ್ದವೇ ಅತ್ತೆ ಆಗಬಹುದು.

ಅತ್ತಿಗೆ ಶಬ್ದಕ್ಕೆ ಅಟ್ಟಿಗೆ ಮೂಲವಾಗಿ ಪ್ರಿಯೆ ಎಂಬ ಅರ್ಥವು ಉಚಿತವೇ. ಅರ್ಥ ಶಬ್ದವು ಧನವೆಂಬ ಅರ್ಥದಲ್ಲಿ—ಅರ್ಥಿಕಾ—ಅತ್ತೆ, ಅತ್ತಿಗೆ ಶಬ್ದಗಳೂ ಅರ್ಥಿ= ಅಟ್ಟಿ ಪ್ರೀತಿ ಎಂಬ ಅರ್ಥವಿಟ್ಟುಕೊಂಡು ಅಟ್ಟಿ ಅತ್ತೆ ಅತ್ತಿಗೆ ಶಬ್ದಗಳೂ ಉಂಟಾಗಿವೆ. "ಅರ್ಥಿ – ಅಟ್ಟಿ – ಅರ್ತಿ ಎಂದು ಆಬದ್ಧಂ" ಎಂದು ಇದನ್ನೆ ಕೇಶಿರಾಜನು ಸಹಜಅಟಗಳ ಪಟ್ಟಿಯಲ್ಲಿ ಹೇಳಿದನು.

ಅಕ್ಕನ ಮಗಳು ಹೆಂಡತಿಯಾಗುವಾಗ, ಅಕ್ಕನೇ ಅತ್ತೆ ಧನಾಧಿಕಾರಿಣಿಯಾಗುವಾಗ, ಅವಳ ಮಗಳು ಪ್ರೀತಿಯವಳಾಗಿಯೂ ಧನಾಧಿಕಾರಿಣಿಯಾಗಿಯೂ ಆಗುವುದರಿಂದ ಅಕ್ಕನ ಮಗಳು ಪ್ರಿಯೆ. ಅತ್ತಿಗೆ, ಹೆಂಡತಿ ಎಂಬ ಅರ್ಥವೂ ಸರಿಯೇ.

ಅತ್ತೆ, ಅತ್ತಿಗೆ, ಅಟ್ಟಿಗೆ, ಅಟ್ಟಿ, ಅರ್ತಿ ಇವೆಲ್ಲಕ್ಕೂ ಪ್ರೀತಿ, ಹಣ, ಯಾಚನೆ, ಅರ್ಥಭೇದದಿಂದ ಅರ್ಥಾ, ಅರ್ಥಿಕಾ, ಅರ್ಥಿ ಶಬ್ದಗಳೇ ನಿಜವಾದ ಮೂಲಗಳೆಂದು ಊಹಿಸಿಕೊಳ್ಳುವಷ್ಟು ವಿವರಿಸಿದ್ದೇನೆ.

ಸೇಡಿಯಾಪು ಕೃಷ್ಣಭಟ್ಟರು ಅತ್ತಿಗೆ ಶಬ್ದವನ್ನು ವಿವೇಚಿಸಿ ಅತ್ತೆ ಅತ್ತಿಗೆ ಶಬ್ದಗಳು (ಜನ್ಯಜನಕ) ತಾಯಿ ಮಗಳು ಸಂಬಂಧವುಳ್ಳವುಗಳೆಂದೂ ವಿಶಾಲಾರ್ಥದಲ್ಲಿ ಪ್ರಯೋಗವುಳ್ಳವುಗಳೆಂದೂ ಹೇಳಿದುದು ಉಚಿತವಾಗಿಯೇ ಇದೆ. ಅತ್ತಿಗೆ ಶಬ್ದ ಪ್ರಯೋಗವನ್ನು ಗೌಣವಾಗಿ ಅನೇಕ ಬಂಧುಗಳನ್ನು ಅತ್ತಿಗೆ ಎಂದೂ ಅತ್ತೆ ಎಂದೂ ಹೇಳಬಹುದು. ಅಪ್ಪಾ, ಅಣ್ಣಾ, ತಮ್ಮಾ, ತಾಯೀ ಎಂದು ಗೌಣವಾಗಿ ಎಲ್ಲಾ ಸ್ತ್ರೀ ಪುರುಷರನ್ನೂ ಕರೆಯುವ ರೂಢಿ ವಿಶಾಲಾರ್ಥದಲ್ಲಿ ಇದೆಯಲ್ಲವೆ?

ಅತ್ತಿಗೆ ಶಬ್ದಕ್ಕೆ ಪ್ರಿಯೆ, ಹೆಂಡತಿ, ಎಂಬ ನಿಘಂಟುವಿನ ಅರ್ಥವು ಬೇರೆಬೇರೆ ರೀತಿಯಿಂದ ಹಿಂದೆ ನಾನು ಅರ್ಥ ನಿಷ್ಪತ್ತಿಗಳನ್ನು ತೋರಿಸಿದ ಪ್ರಕಾರದಿಂದ ಉಚಿತ ವಾಗಿದೆ.

ಅತ್ತಿಗೆ ಶಬ್ದಕ್ಕೆ ಪ್ರಿಯೆ ಎಂಬ ಮುಖ್ಯಾರ್ಥದಲ್ಲಿ ಪಂಪ ಪೊನ್ನರ ಪ್ರಯೋಗಗಳೇ ಯಥೇಷ್ಟ ಸಾಕು. ಅಲ್ಲಿ ಅರ್ಥ ಮಾಡುವ ಕ್ರಮವು ಮಾತ್ರ ಬೇರೆಯಾಗಿದೆ.

ಶ್ರೀ ಕೃಷ್ಣಭಟ್ಟರು "ಸೋದರತ್ತೆಯ ಮಗಳೆಂದೇ ಅತ್ತಿಗೆ ಶಬ್ದದ ಮುಖ್ಯಾ ರ್ಥವು. ಪಂಪನೂ, ಪೊನ್ನನೂ, ಈ ಅರ್ಥದಲ್ಲಿಯೇ ಅತ್ತಿಗೆ ಶಬ್ದವನ್ನು ಪ್ರಯೋಗಿಸಿ ದ್ದಾರೆ. 'ಈಗಳಬ್ಬೆಯೆಂದತ್ತಿಗೆ ಎಂಬ ಮಾತೆನಗೇನೆನಲಕ್ಕುಮೆ ಪಂಕಜಾನನೇ ಮೊದಲು ತಾಯಿಯೆಂಬ ಮೊರೆಯಲ್ಲಿ ಭಾವಿಸಿದ್ದ ನಿನ್ನನ್ನು ಈಗ ಅತ್ತಿಗೆ ಎಂಬ ಮೊರೆಯಲ್ಲಿ, ಎಂದರೆ, ಮದುವೆಯಾಗಲು ತಕ್ಕವಳೆಂದು ಕಾಮಾಸಕ್ತಿಯಿಂದ ಭಾವಿಸುವುದು ಉಚಿತವೆ? ಮೊದಲು ಅಬ್ಬೆ! ಎಂದು ಕರೆದು ಈಗ ಅತ್ತಿಗೆ! ಎಂದು (ಅತ್ತೆಯ ಮಗಳೆ!) ಎಂದು ಕರೆಯುವುದು ಸರಿಯೆ? ಎಂಬ ಅರ್ಥವು ನೂರಕ್ಕೆ ನೂರು ಕೂಡುವುದು" ಎಂದು ವಾದಿಸು ವುದು, ಅವಶ್ಯವಿಲ್ಲ. ಆ ಉದಾಹರಣೆಯ ಪದ್ಯದಲ್ಲಿ "ಸೋದರತ್ತೆಯ ಮಗಳು ಮೊರೆ ಯಲ್ಲಿ ವಿವಾಹವಾಗುವುದಕ್ಕೆ ತಕ್ಕವಳು" ಎಂದು ಆದುದರಿಂದ ವ್ಯಂಗ್ಯವಾಗಿ ಪಂಪನು ಅತ್ತಿಗೆ ಎಂದು ಹೇಳಿದ್ದಾನೆ ಎಂದು ಅರ್ಥಮಾಡುವ ಚಮತ್ಕಾರವೂ ಅವಶ್ಯವಿಲ್ಲ. ಅಲ್ಲಿ ವಾಚ್ಯವಾಗಿಯೇ ಅತ್ತಿಗೆ=ಹೆಂಡತಿ ಎಂದು ಹೇಗೆ ಹೇಳಲಿ? ಎಂಬ ಅರ್ಥವೇ ಚೆಂದ ವಾಗುವುದು.

ಅಂಬಾ, ಅಬ್ಬೆ, ಎಂಬ ಎರಡು ಶಬ್ದಗಳೂ ಅಭಿನ್ನಗಳು; ಅವಳಿಗೆ ಅಂಬಾ, ಅಬ್ಬೆ ಎಂಬ ಶಬ್ದಗಳು ಅಂಕಿತ ನಾಮಗಳು; "ಅಬ್ಬೆ" ಎಂಬ ಶಬ್ದಕ್ಕೆ ತಾಯಿ ಎಂಬ ಅರ್ಥವೂ ಇದೆ. ಈ ಶ್ಲೇಷಾರ್ಥವುಳ್ಳ ಅಬ್ಬೆ ಶಬ್ದದಿಂದ ಭೀಷ್ಮನು ಅವಳನ್ನು ಕರೆಯು ತ್ತಿದ್ದನು. ಅಬ್ಬೆ ಎಂದು ಕರೆಯಿಸಿಕೊಂಡವಳು (ತಾಯಿ ಎಂದು ಕರೆಯಿಸಿಕೊಂಡವಳು ಎಂದೂ ಮತ್ತೊಂದು ಅರ್ಥ.) ಅತ್ತಿಗೆ=ಹೆಂಡತಿ ಎಂದು ಕರೆಯಿಸಿಕೊಳ್ಳಲು ಅರ್ಹೆಯಾ ಗಳು (ಹೆಂಡತಿ ಎಂದಾಗಲು ಅರ್ಹೆಯಲ್ಲ.) ತಾಯಿ ಹೆಂಡತಿಯಾಗಲು ಅರ್ಹೆಯಲ್ಲವೆಂದು ಅಬ್ಬೆ ಶಬ್ದದ ಶ್ಲೇಷೆಯಿಂದ ಪಂಪನು ಮಾಡಿದ ಚಮತ್ಕಾರವು ಶಿಖರವನ್ನು ಮುಟ್ಟಿದೆ. ಇದು ಸಾಲದೇ? ಅತ್ತಿಗೆ ಶಬ್ದದಲ್ಲಿ ವ್ಯಂಗ್ಯಾರ್ಥವೇತಕ್ಕೆ? ಇಲ್ಲಿ ನಿರ್ದಾಕ್ಷಿಣ್ಯವಾಗಿ ಹೇಳ ಬೇಕಾದ ಸಂದರ್ಭದಲ್ಲಿ ವ್ಯಂಗ್ಯವಾಗಿ "ನೀನು ಅತ್ತೆಯ ಮಗಳು ಮೊರೆಯಲ್ಲಿ ಇನಿಯ ಳಾಗಲು ಅರ್ಹೆಯಾಗುವಂತೆ ನೀನು ಆಗಲಾರೆ,) – ಎಂದರೆ ಹೆಂಡತಿಯಾಗಲಾರೆ (ವ್ಯಂಗ್ಯ ವಾಗಿ) ಎಂದು ಅಸ್ಪಷ್ಟವಾಗಿ ಹೇಳುವುದೇ ಮಹಾ ಅನುಚಿತವಾಗುವುದು.

ಭೀಮನು "ಕುಡಿವೇಂ ದುಃಶಾಸನೋರಃಸ್ಥಲದ ರುಧಿರಮಂ" ಎಂದು ಸ್ಪಷ್ಟ ವಾಗಿ ಹೇಳಿದರೇ ವೀರರಸ ಪುಷ್ಟಿಯಲ್ಲದೆ ವ್ಯಂಗ್ಯವಾಗಿ ಆ ಅರ್ಥವು ಅಸ್ಪಷ್ಟವಾಗಿ ಬರು ವಂತೆ ಹೇಳಿದರೆ ಹಾಸ್ಯಾಸ್ಪದವಾಗದೇ? ಹಾಗೆಯೇ ಪ್ರಕೃತದಲ್ಲಿಯೂ ನೀನು ಅಬ್ಬೇ– ತಾಯಿ – (ಅಂಕಿತನಾಮ) ನೀನು ಅತ್ತಿಗೆ (ಹೆಂಡತಿ) ಆಗಲಾರೆ ಎಂದು ಧೀರವಾಗಿ ಸ್ಪಷ್ಟ ವಾಗಿ ಈ ಪ್ರಕರಣದಲ್ಲಿ ಹೇಳುವುದೇ ಚೆಂದವಲ್ಲವೇ? ಆ ಪಂಪನ ಪದ್ಯದಲ್ಲಿ "ಮಾತಂ" ಎಂದಿರುವುದರಿಂದ "ಅಬ್ಬೆಯೆಂದತ್ತಿಗೆ ಎಂಬ ಮಾತಂ" ಇದು ಲೋಕೋಕ್ತಿ ಎಂದು ಭ್ರಮಿಸಬಾರದು. ಅಲ್ಲಿ, ನಲ್ಲೆ ಎಂಬ ಮಾತನ್ನೇ ಎತ್ತಬಾರದು. ಮದುವೆಯಾಗುವ

ಕಾರ್ಯವು ದೂರಾಪಾಸ್ತ. ಅಬ್ಬೆಯನ್ನು ಯಾರೂ ಮದುವೆಯಾಗರು. (ತಾಯಿ) ಎಂದೇ ಇಲ್ಲಿ ಅರ್ಥವಿರುವುದು ಉಚಿತವಾದುದರಿಂದ "ಮಾತಂ" ಎಂಬುದರಿಂದ ಲೋಕೋಕ್ತಿ ಎಂದು ತಿಳಿಯಬಾರದು.

"ಇದು ಲೋಕೋಕ್ತಿಯೇ" ಎಂದು ಸಾಧಿಸುವುದಕ್ಕೆ ಶ್ರೀ ಕೃಷ್ಣಭಟ್ಟರು ಪೊನ್ನನ ಶಾಂತಿ ಪುರಾಣದ ತಪ್ಪು ಪಾಠವಿರುವ ಪದ್ಯವನ್ನು ಆಧರಿಸಿ ಮೋಸಹೋಗಿದ್ದಾರೆ.

ಆ ಶಾಂತಿ ಪುರಾಣದ ಪಾಠವು ಹೀಗಿರಬೇಕು.—

ಒಡವುಟ್ಟಿದನರಸಿಯನೆ। ನ್ನೊಡವುಟ್ಟಿದರಬ್ಬೆಯೆನ್ನದೆನ್ನತ್ತಿಗೆ ಯೆಂ।
ದೊಡೆ ನಾಲಗೆಯಾತನ ತಲೆ। ಸಿಡಿಲ್ದು ಪಾರೇಟ್ಗುಮೆನ್ನ ಪಾರುಂಬಳೆಯೊಳ್॥

ಇದರ ಅರ್ಥ—ಆತನ=ತನ್ನ ತಮ್ಮನ ನಾಲಗೆ ಒಡವುಟ್ಟಿದನ ಅರಸಿಯನ್ನು ದಾಸಿಯನ್ನು (ಸೂಳೆಯನ್ನು) ಎನ್ನ ಸೋದರಿಯರು ಎಂದು ಪೂಜ್ಯಾರ್ಥ ಬಹುವಚನ ದಿಂದಲೂ ಎನ್ನ ಅಬ್ಬೆ (ತತ್ಸಮಾನೆ) ಎಂದೂ ಹೇಳದೆ ನನ್ನ ಅತ್ತಿಗೆ=ನಲ್ಲೆ, ಎಂದು ಹೇಳಿದುದರಿಂದ ಆತನ=ತನ್ನ ತಮ್ಮನ ತಲೆ ನನ್ನ ಚಕ್ರದಿಂದ ವಿಕೀರ್ಣವಾಗಿ ಹಾರಿ ಹೋಗುವುದು.

ಈ ನನ್ನ ಪಾಠವನ್ನು ಒಪ್ಪಿಕೊಳ್ಳದೆ ಮುದ್ರಿತ ಪುಸ್ತಕ ಪಾಠವನ್ನೇ ಒಪ್ಪಿ ಕೊಂಡರೆ ಪದ್ಯದ ವಾಕ್ಯಾರ್ಥವು ಕೆಡುವುದು. ಇದ್ದಂತೆ ಅರ್ಥ ಹೇಳುವುದಾದರೆ— ತಮ್ಮನ ನಾಲಗೆಯು ಅಣ್ಣನ ಅರಸಿಯನ್ನು "ಒಡಹುಟ್ಟಿದವಳು" ಎಂದು ಹೇಳದೆ ಅಬ್ಬೆ ಎಂದು ಹೇಳಿ ಮತ್ತೆ ಅತ್ತಿಗೆ=ಹೆಂಡತಿ ಎಂದು ಹೇಳಿತು ; ಎಂದರೆ– ತಮ್ಮನು ಅಣ್ಣನ ಅರಸಿಯನ್ನು "ಸೋದರಿ" ಎಂದು ಹೇಳಬೇಕಿತ್ತು. ಹಾಗೆ ಹೇಳದೆ "ಅಬ್ಬೆ" ಎಂದು ಹೇಳಿದನು. ಮತ್ತೆ ಅತ್ತಿಗೆ=ಹೆಂಡತಿ ಎಂದು ಹೇಳಿದನು. ಎಂದರೆ ತಾತ್ಪರ್ಯವೇನು? ಒಡಹುಟ್ಟಿದವಳೆಂದು ಹೇಳದೆ ಅಬ್ಬೆ ಎಂದು ಹೇಳಿದುದು ತಪ್ಪೊ? ಶಾಂತಿಯ ಪಾಠ ಪ್ರಕಾರ ತಮ್ಮನು ಅಣ್ಣನ ಸೂಳೆಯನ್ನು ಅಬ್ಬೆ ಎಂದು ಹೇಳಿದ್ದಾದರೂ, ಅಂತಹ ಸಂಭವ ವಾದರೂ ಇದೆಯೇ? (ಭೀಷ್ಮನು ಶ್ಲೇಷೆಯಿಂದ ಮೊದಲು ಅಬ್ಬೆ ಎಂದು ಹೇಳುತ್ತಿದ್ದನು) ಇಂತಹ ಅನನ್ವಿತ ವಾಕ್ಯವಾಗುವುದರಿಂದ ಕವಿಯು ಹಾಗೆ ರಚಿಸಿರಲಾರನೆಂದು ತಿದ್ದಿದು ದಾಗಿದೆ.

"ಅಣ್ಣನ ಹೆಂಡತಿಯನ್ನು ಸೋದರೀ! ತಾಯಿಾ! ಎಂದು ಹೇಳಬೇಕಿತ್ತು. ಹಾಗೆ ಹೇಳದೆ (ವರ್ತಿಸದೆ) ಅತ್ತಿಗೆ (ಹೆಂಡತಿ) ಎಂದು ಕಾರ್ಯತಃ ವರ್ತಿಸಿದನು. ಅಂತಹ ಆ ತಮ್ಮನ ತಲೆಯನ್ನು ಚಕ್ರದಿಂದ ಕಡಿದು ಹಾರಿಸುವೆನು" ಎಂದು ಹೇಳುವುದೇ ಕವಿ ಸಂಮತಾರ್ಥವು.

ಇಲ್ಲಿ ಪಂಪನಂತೆ "ಮಾತಂ" ಎಂಬ ಶಬ್ದವೂ ಇಲ್ಲ. "ಅಬ್ಬೆಯೆನ್ನದೆ" ಎಂದು ತಿದ್ದದಿದ್ದರೆ ಆ ಪದ್ಯದಲ್ಲಿ ಅಬ್ಬೆ ಎಂಬ ಪದವೇ ವಾಕ್ಯಾರ್ಥದಲ್ಲಿ ಬೇಡವಾಗುವುದು.

"ಅಣ್ಣನ ಹೆಂಡತಿಯನ್ನು ಸೋದರಿ ಎನ್ನದೆ ಅತ್ತಿಗೆ ಎಂದ ತಮ್ಮನ ತಲೆ ಕಡಿಯುವೆನು" ಎಂಬ ಇಷ್ಟರಿಂದಲೇ ವಾಕ್ಯಾರ್ಥವು ಪೂರ್ಣವಾಗುವುದು. ಪಂಪನಲ್ಲಿ ಅಬ್ಬೆ ಶಬ್ದಕ್ಕೆ ಶ್ಲೇಷೆಯ ಚಮತ್ಕಾರವಿದೆ. ಇಲ್ಲಿ ಅಂತಹ ಚಮತ್ಕಾರವೇನೂ ಇಲ್ಲ. ಇಲ್ಲಿ ಕ್ರೋಧೋನ್ಮತ್ತನಾದ ಅಣ್ಣನು ಅತ್ತಿಗೆ ಎಂಬ ಶಬ್ದದಿಂದ ವ್ಯಂಗ್ಯವಾಗಿ ಹೆಂಡತಿ ಎಂಬ ಅರ್ಥವನ್ನು ಸೂಚಿಸುವುದೂ ರಸಾಭಾಸವೇ.

ಭೀಮನು ಕ್ರೋಧಾವೇಶದಿಂದ " ಕುಡಿವೇಂ ದುಃಶಾಸನೋರಃ ಸ್ಥಲ" ಇತ್ಯಾದಿ ವಾಕ್ಯಗಳ ಅರ್ಥವು ವ್ಯಂಗ್ಯವಾಗಿ ಪ್ರತೀತವಾಗುವಂತೆ ಹೇಳಿದರೆ ರಸ ಕೆಡದೇ? ಕೇಳಿದವರೂ ನಗರೇ?

ಆದುದರಿಂದ ಅತ್ತಿಗೆ ಶಬ್ದಕ್ಕೆ ನನ್ನ ಹೆಂಡತಿ ಎಂದೇ ವಾಚ್ಯಾರ್ಥವಾಗಿ ಇರುವುದೇ ರಸಪೋಷಕವಾಗಿದೆ.

ಅತ್ತೆಯ ಮಗಳೆಂದೂ ನಾನು ಹಿಂದೆ ಹೇಳಿದಂತೆ ಅತ್ತಿಗೆ ಶಬ್ದದ ಒಂದು ಅರ್ಥವು ಆಗುವುದು ತಕ್ಕುದೇ. ಪಂಪ ಶಾಂತಿಗಳ ಪದ್ಯಗಳಲ್ಲಿ ಮಾತ್ರ ಪ್ರಿಯೆಯೆಂಬ ಅರ್ಥವೇ ಅವಶ್ಯವಾದುದರಿಂದ ಅತ್ತಿಗೆ ಶಬ್ದಕ್ಕೆ ಪ್ರಿಯೆ ಎಂಬ ಅರ್ಥದಲ್ಲಿ ಇವುಗಳೇ ಉತ್ತಮ ಉದಾಹರಣೆಗಳು ಎಂದು ಒಪ್ಪಿಕೊಳ್ಳಬೇಕು.

ಇಲ್ಲಿ ಶ್ರೀ ಕೃಷ್ಣಭಟ್ಟರು ಹೇಳುವ ಮೊರೆ=ಮೊಱೆ ಎಂಬ ಶಬ್ದದ ಅರ್ಥವನ್ನು ವಿವೇಚಿಸುವುದು ಅಪ್ರಕೃತವೆಂದು ಬಿಡುವೆನು. ಆದರೆ ಪಂಪಭಾರತದ ಟಿಪ್ಪಣಿಯಲ್ಲಿ ಹೇಳಿದ ಅರ್ಥವು ಸಮಂಜಸವಾದುದೆಂದು ಮಾತ್ರ ಹೇಳಿ ವಿರಮಿಸುವೆನು.

## ೩. ಶ್ರೀ ರಾ. ಅನಂತಕೃಷ್ಣಶರ್ಮರವರ ಲೇಖನ

ಕನ್ನಡದ 'ಅತ್ತಿಗೆ', 'ಅತ್ತಿಕಾ' ಶಬ್ದವೇ. 'ಅತ್ತಿಕಾ ಭಗಿನೀ ಜ್ಯೇಷ್ಠಾ' ಎಂದು ನಾಟಕ ಪರಿಭಾಷೆಯಾಗಿ ಅಮರದಲ್ಲಿದೆಯಷ್ಟೆ; ಆದ್ದರಿಂದ ಅದು ದೇಶೀಯ ಪ್ರಾಕೃತ ಶಬ್ದವೆಂದು ನಾವು ಊಹಿಸಬಹುದು. ಅತ್ತಾ ಎಂಬ ಶಬ್ದವೇ ಕಪ್ರತ್ಯಯ ಸಹಿತ ಅತ್ತಿಕಾ ಆಗಬಹುದು. ಪ್ರಾಕೃತದಲ್ಲಿ — ಸಂಸ್ಕೃತದಲ್ಲೂ – ಹೀಗೆ ಅರ್ಥವಿಶೇಷವಿಲ್ಲದ ಕಪ್ರತ್ಯಯ ಹೇರಳವಾಗಿ ಬಳಕೆಯಲ್ಲಿದೆಯಷ್ಟೆ. ಅಕ್ಕ ಎಂಬರ್ಥದಲ್ಲಿ ಹಿಂದೆ ಬಳಕೆಯಲ್ಲಿದ್ದ 'ಅತ್ತಿಕಾ' ಕನ್ನಡದಲ್ಲಿ ಅತ್ತಿಗೆ ಆದಾಗ ಅಣ್ಣನ ಹೆಂಡತಿಯೆಂಬ ಸಮೀಪಾರ್ಥಕ್ಕೆ ಬರುವುದೂ ಸಾಧಾರಣವೇ. ಈ ಅಪ್ಪ ಅಬ್ಬ ಅಮ್ಮ ಇತ್ಯಾದಿ ಶಬ್ದಗಳಿಗೆ ಬಂದಿರುವ ಲಿಂಗಭೇದವೂ ಅರ್ಥಭೇದವೂ ದ್ರಾವಿಡ ಭಾಷೆಗಳಲ್ಲಿ ವಿಚಿತ್ರವಾಗಿ ಕಾಣುತ್ತಿದೆ. ಆದ್ದರಿಂದ 'ಅತ್ತಿಗೆ'ಯಲ್ಲಿ 'ಗೆ' ಎಂಬುದಕ್ಕೆ ಪ್ರತ್ಯೇಕ ಮೂಲ ಹುಡುಕಬೇಕಾಗಿಲ್ಲ.

## ೪

ಮುಂದೆ, ನನಗೆ ತೋರುವ ಕೆಲವು ಮಾತುಗಳನ್ನು ಬರೆದಿದ್ದೇನೆ :—

ಈಗ ನಾವು 'ಅತ್ತಿಗೆ' ಎಂಬ ಮಾತನ್ನು 'ಅಣ್ಣನ ಹೆಂಡತಿ' ಎಂಬರ್ಥದಲ್ಲಿ ಮಾತ್ರವಲ್ಲದೆ ಗಂಡನ ಅಕ್ಕ, ಹೆಂಡತಿಯ ಅಕ್ಕ, ಎಂಬ ಸಂಬಂಧಗಳನ್ನು ಸೂಚಿಸುವುದಕ್ಕೂ, ಕೆಲವುವೇಳೆ ಸೋದರತ್ತೆಯ ಅಥವಾ ಸೋದರಮಾವನ ಮಗಳಿಗೂ ಉಪಯೋಗಿಸುತ್ತೇವೆ. ಇದರಲ್ಲಿ ಸಾಮಾನ್ಯವಾಗಿ ತನಗಿಂತ ಹಿರಿಯಳು ಎಂಬರ್ಥ ಅಡಗಿರುತ್ತದೆ. ತಮ್ಮನ ಹೆಂಡತಿ, ಗಂಡನ ತಂಗಿ, ಹೆಂಡತಿಯ ತಂಗಿಯರನ್ನು 'ನಾದಿನಿ' ಎನ್ನುತ್ತೇವೆ. ಇದರಲ್ಲಿ ಕಿರಿಯಳು ಎಂಬರ್ಥ ಅಡಗಿರುತ್ತದೆ. ಈ ಅತ್ತಿಗೆ ಎಂಬ ಮಾತು ಅಣ್ಣನ ಹೆಂಡತಿ

ಎಂಬ ಅರ್ಥದಲ್ಲಿ ಕನ್ನಡದಲ್ಲಿ ಎಂದಿನಿಂದ ರೂಢಿಗೆ ಬಂದಿದೆ ಎಂಬುದು ವಿಚಾರಾರ್ಹ ವಾದದ್ದು.೧

ತಮಿಳು ತೆಲುಗುಗಳಲ್ಲಿ ಇದರ ಪ್ರಯೋಗವಿಲ್ಲ. ತಮಿಳರು ಅಣ್ಣನ ಹೆಂಡತಿಯನ್ನು 'ಮನ್ನಿ' 'ಮದನಿ' 'ಅಣ್ಣಿ' (?) ಎನ್ನುತ್ತಾರೆ. ತೆಲುಗರು 'ವದಿನೆ' ಅಥವಾ 'ವದಿನಿಯ' ಎನ್ನುತ್ತಾರೆ. ಅದೇ ಮಾತನ್ನು ತನಗಿಂತ ಹಿರಿಯಳಾದ ಸೋದರ ಮಾವನ ಮಗಳು, ಸೋದರತ್ತೆಯ ಮಗಳು, ಹೆಂಡತಿಯ ಅಕ್ಕ, ಗಂಡನ ಅಕ್ಕ ಎಂಬ ಸಂಬಂಧಗಳನ್ನು ಸೂಚಿಸುವುದಕ್ಕೂ ಉಪಯೋಗಿಸುತ್ತಾರೆ. ಇದು ಅರ್ಥದಲ್ಲಿ ಕನ್ನಡದ 'ಅತ್ತಿಗೆ'ಗೆ ಸ್ವಲ್ಪ ಹೆಚ್ಚು ಕಡಮೆ ಸಮಾನವೆನ್ನಬಹುದು. ಮರಾಠಿಯಲ್ಲಿ 'ವಹಿನೀ' 'ವೈನೀ' ಎಂಬ ಪದಗಳೂ ಕೊಂಕಣಿಯಲ್ಲಿ 'ವಹ್ನಿ' ಎಂಬ ಪದವೂ ಅಣ್ಣನ ಹೆಂಡತಿ ಎಂಬ ಅರ್ಥದಲ್ಲಿ ರೂಢಿಯಾಗಿವೆ. (ಇದು ಒಬ್ಬೊಬ್ಬರ ಉಚ್ಚಾರಣೆಯಲ್ಲಿ ಒಂದೊಂದು ಬಗೆಯಾಗಿರುತ್ತದೆ.) ಈ ಶಬ್ದ ತೆಲುಗಿನ 'ವದಿನೆ'ಗೆ ಸಂಬಂಧಪಟ್ಟಿರುವಂತೆ ಕಾಣುತ್ತದೆ. ತಮಿಳಿನ 'ಮನ್ನಿ' (ಮದನಿ) ಯೂ ಸಾನುನಾಸಿಕವಾದ 'ವದಿನೆ' ಯಾಗಿರಬಹುದು. ಕೆಲವು ತಮಿಳರು 'ಮೈದಿನೀ' ಎಂದೂ ವ್ಯವಹರಿಸುತ್ತಾರೆ. ಕನ್ನಡದಲ್ಲಿ ಮೈದುನ, ಭಾವಮೈದುನ ಎಂಬ ಮಾತು ಪ್ರಯೋಗದಲ್ಲಿದೆ; ಇದಕ್ಕೆ ಗಂಡನ ತಮ್ಮ, ಹೆಂಡತಿಯ ಅಣ್ಣ ಅಥವಾ ತಮ್ಮ, ತಂಗಿಯ ಗಂಡ ಎಂದು ಅರ್ಥ. ಗಂಡನ ಅಣ್ಣನು ಸಾಧಾರಣವಾಗಿ ಭಾವ. ಮರಾಠಿಯಲ್ಲಿ 'ಮೇಹುಣಾ' (ಮೈದುನ) 'ಮೇಹುಣೀ' (ಮೈದುನಿ) ಎಂಬ ಮಾತುಗಳಿವೆ. ಈ ಮೈದುನನ೨ ಮೈದುನಿ ಎಂಬ ಸ್ತ್ರೀಲಿಂಗರೂಪ 'ಮನ್ನಿ' 'ವಯಿನಿ' 'ವದಿನಿ' ಆಗಿರಬಹುದೇ? 'ವಹಿನೀ' ಶಬ್ದಕ್ಕೆ 'ವಹುಣ್ಣಿ' ಎಂಬ ರೂಪವೂ ಇದ್ದು ಅದು 'ವಧೂ+ಅಣ್ಣಿ' ಯಿಂದ ಆಗಿರಬಹುದೆಂದು ಊಹೆ. ಕನ್ನಡದಲ್ಲಿ ಈ ಮುದ್ದಾದ 'ಅಣ್ಣಿ' ಎಂಬ ಮಾತು ಏಕೆ ಬರಲಿಲ್ಲವೋ! ಅದು ಈಗ ಅಣ್ಣಿಯಮ್ಮ (ಮಾರಮ್ಮನಂಥ ಒಂದು ದೇವತೆ) ಅಮ್ಮಣ್ಣಿ ಎಂಬ ಕೆಲವೆಡೆಗಳಲ್ಲಿ ಮಾತ್ರ ಕಾಣುತ್ತಿದೆ.

ಸಂಸ್ಕೃತದಲ್ಲಿಯೂ ತಜ್ಜನ್ಯವಾದ ಕೆಲವು ಔತ್ತರೇಯ ಭಾಷೆಗಳಲ್ಲಿಯೂ ಅತ್ತಿಗೆಯು 'ಭ್ರಾತೃ-ಜಾಯೆ'. (ಮರಾಠಿಯಲ್ಲಿ ಭಾವಜಇ ಅಥವಾ ಭಾವಜಾಯ.) ಅಮರವು 'ಪ್ರಜಾವತಿ' ಎಂಬ ಹೆಸರನ್ನೂ ಕೊಡುತ್ತದೆ (೨-೬-೨೯೬). ಅವಳ ಮಕ್ಕಳಿಂದ ವಂಶಾಭಿವೃದ್ಧಿಯಾಗುವುದರಿಂದಲೋ ಏನೋ! ಅದಿರಲಿ. ನಮಗೆ ಪ್ರಕೃತವಾದದ್ದು ವದಿನೆ ಮದನಿಗಳಲ್ಲ, ಅತ್ತಿಗೆ.

---

೧ 'ವಡ್ಡಾರಾಧನೆ' (೯೦೦?) ಯದೇ ಅತ್ಯಂತ ಪ್ರಾಚೀನವಾಗಿ ಕಾಣುವ ಪ್ರಯೋಗ. ಅದಕ್ಕಿಂತ ಹಿಂದಿನ ಸಾಹಿತ್ಯ ದೊರೆತಿಲ್ಲ. ದೊರೆತಿರುವ ಹಿಂದಿನ ಶಾಸನಗಳಲ್ಲಿ ಈ ಶಬ್ದ ಸಿಕ್ಕಿಲ್ಲ. 'ವಡ್ಡಾರಾಧನೆ'ಯು ಅದರ ಕಾಲ ದೇಶ ವಿಷಯ ಕರ್ತೃತ್ವಾದಿಗಳ ದೃಷ್ಟಿಯಿಂದ ಒಂದು ಹಿರಿಯ ಸಮಸ್ಯೆಯಾಗಿದೆ. ಅದು ಅಷ್ಟು ಪ್ರಾಚೀನವಲ್ಲವಾದರೆ, ಪಂಪನ ಕಾಲದಲ್ಲಿ 'ಅತ್ತಿಗೆ' ಶಬ್ದಕ್ಕೆ ಅಣ್ಣನ ಹೆಂಡತಿ ಎಂಬ ಅರ್ಥವಿತ್ತೇ ಎಂಬುದೇ ಸಂದೇಹಕ್ಕಿಟ್ಟುಕೊಳ್ಳುತ್ತದೆ.

೨ ಮಧ್ಯಮಸ್ವರ ಸಾಧಾರಣವಾಗಿ ಅಸ್ಪಷ್ಟವಾಗಿರುವುದರಿಂದ, ಮಯ್ದುನ ಮಯ್ದುನ ಎರಡೂ ಆಗಬಹುದು. ಉಚ್ಚಾರಣೆಯಲ್ಲಿ 'ಮೈದ್ನ' ಎಂದೇ ಕೇಳುತ್ತದೆ. ತಮಿಳಿನಲ್ಲಿ ಮಚ್ಚಾನ್, ತೆಲುಗಿನಲ್ಲಿ ಮರದಿ (ಮರಿದಿ) ಎಂಬ ಶಬ್ದಗಳಿವೆ. ಆದ್ದರಿಂದ ಇದು ಮರ್ಕ ಅಥವಾ-ಮಯ್ಧುನ (< ಮಿಥುನ) ಎಂಬ ಶಬ್ದದಿಂದ ನಿಷ್ಪನ್ನವಾಗಿರಬಹುದು. ಇವಕ್ಕೆ 'ಪ್ರಣಯಿ' 'ಸಂಗಾತಿ' ಎಂದು ಅರ್ಥ.

ಅಮರಕೋಶದ ನಾಟ್ಯ ವರ್ಗದಲ್ಲಿ (೨೧೮) 'ಅತ್ತಿಕಾ' ಎಂಬ ಮಾತು ಬರುತ್ತದೆ. ಅದಕ್ಕೆ 'ಭಗಿನೀ ಜ್ಯೇಷ್ಠಾ' ಎಂದರೆ 'ಅಕ್ಕ' ಎಂದು ಅರ್ಥ ಹೇಳಿದೆ. ಯಾರ ಅಕ್ಕ? ಈಗ, ಗಂಡನ ಅಕ್ಕ ಹೆಂಡತಿಯ ಅಕ್ಕ ಇಬ್ಬರೂ ಅತ್ತಿಗೆಯರೇ. ನಾಟಕದಲ್ಲಿ ಇದರ ಪ್ರಯೋಗ ನನ್ನ ಕಣ್ಣಿಗೆ ಬಿದ್ದಿಲ್ಲ. ಅದೇ ಶ್ಲೋಕದ ಉತ್ತರಾರ್ಧದಲ್ಲಿ ಉಕ್ತವಾದ ಹಂಡೇ ಹಂಜೇ ಹಲಾ ಶಬ್ದಗಳನ್ನು ಅನೇಕ ಕಡೆ ನೋಡಿದೆ. ಈ 'ಅತ್ತಿಕಾ' ಶಬ್ದ ಅತ್ತಿಗೆಯಾಗಿರುವುದು ಸಂಭವ; ಅತ್ತಿಗೆ(ಗ್ಯೆ)ಯಿಂದ ಸಂಸ್ಕೃತದ 'ಅತ್ತಿಕಾ' ಆಗಿರುವುದು ಹೆಚ್ಚು ಸಂಭವ. ರೂಪವೇನೋ ಆಯಿತು; ಆದರೆ 'ನಾಟ್ಯ'ಕ್ಕೂ 'ಗೃಹಕೃತ್ಯ'ಕ್ಕೂ ಏನು ಸಂಬಂಧ? 'ನಟಿ'ಗೂ ಅಣ್ಣನ ಹೆಂಡತಿಗೂ ಹೇಗೆ ಸಂಬಂಧ?

ಅಮರ ವ್ಯಾಖ್ಯಾನಕಾರರಾದ ಕ್ಷೀರಸ್ವಾಮಿ ಮಹೇಶ್ವರರು ಅತ್ತಿಕಾ ಎಂಬುದಕ್ಕೆ 'ಅಂತಿಕಾ' ಎಂಬ ರೂಪವೂ ಉಂಟೆಂದೂ, ಅದಕ್ಕೆ 'ಅತ್ತಾ' 'ಮಾತಾ' ಎಂದು ಅರ್ಥವೆಂದೂ ವ್ಯಾಖ್ಯಾನ ಮಾಡುತ್ತಾರೆ. ಗುರುಬಾಲಪ್ರಬೋಧಿಕೆ ಎಂಬ ಕನ್ನಡ ಟೀಕೆಯು 'ಅತ್ತಿಕಾ – ಅಕ್ಕನ ಹೆಸರು. ಭ್ರಾತೃಭಾರ್ಯಾಂ ವಚನ್ಯೈರತ್ತೀತ್ಯತ್ತಿಕಾ' ಎಂದು ಹೇಳುತ್ತದೆ. ಅದರ ಪ್ರಕಾರ ಅತ್ತಿಗೆ ಎಂದರೆ (ಗಂಡನ) ಅಕ್ಕ. ಆ ಶಬ್ದದ ರೂಪನಿಷ್ಪತ್ತಿಯೂ ಅರ್ಥವಿವರಣೆಯೂ ಮುಂದೆ ಬರುವ 'ಅತ್ತಿ' 'ಅತ್ತಾ' ಎಂಬವುಗಳಿಗೆ ಹೇಳಿರುವಂತೆಯೇ ವಿಚಿತ್ರವಾಗಿವೆ. ಮಂಗರಾಜ ನಿಘಂಟು (೧೩೪೮) 'ಭ್ರಾತೃವಧುವಕ್ಕು' ಎಂದು ಹೇಳುತ್ತದೆ. ಆದರೆ ಭ್ರಾತೃವೆಂದರೆ ಅಣ್ಣನೂ ಆಗಬಹುದು ತಮ್ಮನೂ ಆಗಬಹುದು. ಚನ್ನವೀರ ಕವಿಯ ಕಾ. ಶ. ಧಾತುಪಾಠ ಮಾತ್ರ (ಸು. ೧೫೮೦) 'ಅಣ್ಣನ ಹೆಂಡತಿ' ಎಂದು ಸ್ಪಷ್ಟವಾಗಿ ಹೇಳಿದೆ. (ಇಲ್ಲಿಯೂ ಅದಭಕ್ಷಣೇಯಿಂದ ನಿಷ್ಪತ್ತಿ !).

ಶಬ್ದಕಲ್ಪದ್ರುಮವು ಅತ್ತಾ, ಅತ್ತೀ, ಅತ್ತಿಕಾ ಈ ಮೂರು ಮಾತುಗಳನ್ನೂ ಕೊಡುತ್ತದೆ. ಅದರ ಪ್ರಕಾರ, ಅತ್ತಾ ಎಂದರೆ ತಾಯಿ, ಅಕ್ಕ, ಎಂದರ್ಥ. ಪ್ರಾಕೃತ ಭಾಷೆಯಲ್ಲಿ ಗಂಡನ ಅಥವಾ ಹೆಂಡತಿಯ ತಾಯಿ ಎಂದೂ ಅರ್ಥ. (ಸಾಹಿತ್ಯ ದರ್ಪಣ ಟೀಕೆ.) ಅತ್ತಿ, ಅತ್ತಿಕಾ ಎರಡೂ ಒಂದೇ. (ಸ್ವಾರ್ಥೇ ಕನ್.) ನಾಟ್ಯೋಕ್ತಿಯಲ್ಲಿ ಅಕ್ಕ ಎಂದರ್ಥ. ಅತ್ತಾ ಎಂಬುದಕ್ಕೆ 'ಅತತಿ ಸತತಂ ಸ್ನೇಹಂ ಸಂಬಧ್ನಾತಿ—ಸದಾ ಸ್ನೇಹ ತೋರಿಸುವವಳು' ಎಂದೂ, ಅತ್ತಿ ಎಂಬುದಕ್ಕೆ 'ಅತ್ಯತೇ ಸತತಂ ಕರ್ಮಣಿ ಸಂಬಧ್ಯತೇ ಅನಯಾ—ಸದಾ ದುಡಿಯುತ್ತಿರುವವಳು' ಎಂದೂ ರೂಪನಿಷ್ಪತ್ತಿ, ಅರ್ಥ ನಿರ್ವಚನ.೩

ಮಹಾರಾಷ್ಟ್ರ ಶಬ್ದಕೋಶದ ಪ್ರಕಾರ, ಆತ್ಯಾ (= ಆತ = ಆತ್ತೀ) = ತಂದೆಯ ತಂಗಿ ಅಥವಾ ಅಕ್ಕ, ಗಂಡನ ಅಥವಾ ಹೆಂಡತಿಯ ತಾಯಿ. [ಸಂ. ಅತ್ತಾ, ಅತ್ತೀ, ಅತ್ತಿಕ; ಪ್ರಾ. ಅತ್ತಾ = ಆಈ, ಸಾಸೂ; ಕನ್ನಡ ಅತೇ, ಅತ್ತಿ = ಸಾಸೂ (ಶ್ವಶ್ರೂಃ)]

ದೇಶೀನಾಮಮಾಲೆಯು ಅತ್ತಾ ಎಂಬ ಮಾತನ್ನು ಕೊಟ್ಟು ಅದಕ್ಕೆ ತಾಯಿ, ತಂದೆಯ ಅಕ್ಕ ಅಥವಾ ತಂಗಿ, ಶ್ವಶುರನ (ಮಾವನ) ಹೆಂಡತಿ, ಸಖಿ, ಎಂಬರ್ಥಗಳನ್ನು ಹೇಳುತ್ತದೆ.

೩ ಕೆಲವರು 'ಅತ ಸಾತತ್ಯ ಗಮನೇ' ಎಂಬ ಧಾತುವಿನಿಂದ ನಿರ್ವಚಿಸುತ್ತಾರೆ.

ಬಂಗಾಳಿ ನಿಘಂಟು (ಸುಬಲ ಚಂದ್ರಮಿತ್ರ) ಅತ್ತಾ ಎಂಬ ಮಾತಿಗೆ ತಾಯಿ, ಅಕ್ಕ, ತಾಯಿಯ ಅಕ್ಕ, ಹೆಂಡತಿಯ ತಾಯಿ ಎಂಬ ನಾಲ್ಕು ಅರ್ಥಗಳನ್ನು ಕೊಟ್ಟು, ನಾಟ್ಯದಲ್ಲಿ ಅತ್ತಿ ಅಥವಾ ಅತ್ತಿಕಾ ಎಂಬುದಕ್ಕೆ 'ಅಕ್ಕ' ಎಂದು ಅರ್ಥ ಹೇಳುತ್ತದೆ.

ತೆಲುಗಿನಲ್ಲಿ (ಬ್ರೌನ್, ಸೀತಾರಾಮಾಚಾರ್ಯ) ಅತ್ತಿಕ=(ನಾಟ್ಯ ಪರಿಭಾಷೆಯಲ್ಲಿ) ಅಕ್ಕ ; ಅತ್ತ=ಗಂಡನ ಅಥವಾ ಹೆಂಡತಿಯ ತಾಯಿ. (ಸಂಸ್ಕೃತದಲ್ಲಿ) ಅಕ್ಕ, ತಾಯಿ,— ಎಂದು ಅರ್ಥ.

ಬ್ರೌನ್ ಅವರು 'ಅತ್ತ' ಶಬ್ದವು ತೆಲುಗೆಂದೂ ಸಂಸ್ಕೃತವು ಅದನ್ನು ತನ್ನ ನಾಟ್ಯ ಪರಿಭಾಷೆಗೆ ಎರವಲು ಮಾಡಿಕೊಂಡಿದೆಯೆಂದೂ ಹೇಳುತ್ತಾರೆ.

ಕಾಶಕೃತ್ಸ್ನವು, ಅತ್ತಾ = ಮಾವನ ಹೆಂಡತಿ ಎಂದು ಅರ್ಥಕೊಟ್ಟದೆ.

ಮಾನಿಯರ್ ವಿಲಿಯಂಸ್ ಅವರು 'ಅತ್ತಾ' ಎಂಬ ಮಾತನ್ನು ಕೊಟ್ಟು, (ಬಹಳ ಎಚ್ಚರಿಕೆಯಿಂದ), ಪ್ರಾಯಶಃ ದಕ್ಷಿಣದೇಶದ ಬಳಕೆ ಭಾಷೆಯಿಂದ ಬಂದಿರಬಹುದೆಂದೂ, ಮುಖ್ಯವಾಗಿ ನಾಟ್ಯದಲ್ಲಿ ಪ್ರಯುಕ್ತವಾಗಿರುವಂತೆ ಹೇಳಲಾಗಿದೆಯೆಂದೂ ತಿಳಿಸಿ, ಇದಕ್ಕೆ ತಾಯಿ, ತಾಯಿಯ ಅಕ್ಕ ತಂಗಿ, ಅಕ್ಕ, (ಪ್ರಾಕೃತದಲ್ಲಿ) ಗಂಡನ ಅಥವಾ ಹೆಂಡತಿಯ ತಾಯಿ ಎಂದು ಅರ್ಥಕೊಡುತ್ತಾರೆ.

ಮೇಲಿನ ಎಲ್ಲಾ ಕೋಶಗಳಲ್ಲಿಯೂ ಅತ್ತಾ, ಅತ್ತಿ, ಅತ್ತಿಕಾ ಎಂಬ ಸ್ತ್ರೀಲಿಂಗ ರೂಪಗಳೇ ದೊರೆಯುತ್ತವೆ. ತಮಿಳಿನಲ್ಲಿ ಮಾತ್ರ (ಲೆಕ್ಸಿಕನ್) ಅತ್ತಿ ಎಂಬುದರ ಜೊತೆಗೆ ಅತ್ತನ್, ಅತ್ತಾನ್ ಎಂಬ ಪುಲ್ಲಿಂಗ ರೂಪಗಳು ದೊರೆಯುತ್ತವೆ. ಆದರೆ, ಹಿಂದೆಯೇ ತಿಳಿಸಿದಂತೆ, ಅದು ಅತ್ತಿಕ್ಕೈ ಅತ್ತಿಕಾ ಎಂಬ ರೂಪಗಳನ್ನು ಕೊಡುವುದಿಲ್ಲ. ಅದರ ಪ್ರಕಾರ, ಅತ್ತನ್ ಎಂದರೆ, ತಂದೆ, ಹಿರಿಯ, ಪೂಜ್ಯ, ಪುರೋಹಿತ, ಶಿವ, ವಿಷ್ಣು, ಅರ್ಹಂತ ಎಂದೂ, ಅತ್ತಿ ಎಂದರೆ ಅಕ್ಕ ಎಂದೂ, ಅತ್ತಾನ್ ಎಂದರೆ ಅಕ್ಕನ ಗಂಡ ಎಂದೂ ಅರ್ಥ. ಗಂಡಸಾಗಲಿ ಹೆಂಗಸಾಗಲಿ ಹಿರಿಯರನ್ನೇ ಸೂಚಿಸುತ್ತದೆ ಎಂಬುದು ಗಮನಾರ್ಹ. ಆದರೆ ತನಗಿಂತ ಮೊದಲು ಹುಟ್ಟಿದವಳು ಎಂಬ ಅರ್ಥ ಸೂಚಿಸಲು 'ಅಕ್ಕ' ಶಬ್ದವಿರುವಾಗ ಅದೇ ಅರ್ಥದ 'ಅತ್ತಿ' ಏಕೆ? 'ಅತ್ತಿ'ಯು ಅತ್ತನ್ ಅಥವಾ ಅತ್ತಾನ್ (–ಅನ್,–ಆನ್ ಎರಡೂ ಒಂದೇ.) ಎಂಬುದಕ್ಕೆ ಸಂಬಂಧಪಟ್ಟು ಅದರ ಸ್ತ್ರೀಲಿಂಗವಿರಬೇಕು; ಅಥವಾ √ಅತ್ತ್* ಎಂಬ ಮೂಲ ಧಾತುವಿಗೆ ಪುಲ್ಲಿಂಗ ಸ್ತ್ರೀಲಿಂಗ ಸೂಚಕ ಪ್ರತ್ಯಯಗಳೆರಡೂ ಹತ್ತಿರಬೇಕು. ಅತ್ + ಕೈ (ಗೈ) ಎಂಬುದನ್ನು ಅಣ್ಣನ ಹೆಂಡತಿಯನ್ನು ಸೂಚಿಸಲು ಉಪಯೋಗಿಸುತ್ತಿರಬೇಕು. ಕೈ ಗೈ ಎಂಬುದಕ್ಕೆ ಸಹಾಯಕಳು, ಹೆಂಗಸು, ಎಂದು ಅರ್ಥವಿದ್ದಿರಬೇಕೆಂದು ತೋರುತ್ತದೆ. ಆಗ ಸಹಾಯಿಕೆಯರಲ್ಲಿ ತಂಗೈ ಮಂಗೈ ಚಿಕ್ಕವರು, ಅತ್ತಿಗೈ ಹಿರಿಯವಳು.೪ ಪ್ರಾಯಶಃ 'ಅಕ್ಕ'ಕ್ಕೂ ಇಂಥದೇ ಒಂದು ನಿಷ್ಪತ್ತಿಯನ್ನು ಹೇಳಬೇಕಾದೀತು. (ಇಲ್ಲ, ಇದು ಬೇರೆ ಭಾಷಾವರ್ಗದ್ದೋ! ಲ್ಯಾಟಿನ್ ಭಾಷೆಯಲ್ಲಿ 'ಅಕ' ಎಂಬ ಶಬ್ದವಿದೆ.)

---

೪ ಕೆಲವು ತಮಿಳರಲ್ಲಿ ಬಳಕೆಯಾಗಿರುವ 'ಅತ್ತಂ-ಗಾಯ್' (=ಅತ್ತನ್ + ಕೈ) ಪದವನ್ನೂ ಹೋಲಿಸಿ.

ಅಥವಾ, ‘ ಅತ್ತನ್ ’ ಯಜಮಾನನಾದರೆ, ‘ ಅತ್ತಿ-ಕ್ಕೈ ’ ಯಜಮಾನಿಯಾಗ ಬಹುದು.—‘ ಅಮ್ಮಾವರು ’ ಎಂಬಂತೆ. ಅವಳು ನಾಟ್ಯದಲ್ಲಿ ಮುಖ್ಯ ಸಹಾಯಕಳಾಗಿ ಹೆಚ್ಚು ರೂಢಿಯಾಗಿದ್ದಿರಬಹುದು. ಈಗಲೂ ಭರತನಾಟ್ಯದಲ್ಲಿ, ಅನೇಕವೇಳೆ, ಹಿರಿಯ ಹೆಂಗಸೊಬ್ಬಳು ಹಿಂದೆ ತಾಳ ಕುಟ್ಟುತ್ತ, ಹಾಡನ್ನು ಮೆಲ್ಲಗೆ ಹೇಳುತ್ತ, ಹಿಮ್ಮೇಳ ಕೊಡು ತ್ತಿರುವುದನ್ನು ನೋಡುತ್ತೇವೆ. ಅವಳನ್ನು ಮರ್ಯಾದೆಗೆ ಶಿಷ್ಯಳೂ ಇತರರೂ ‘ ಅಮ್ಮ ! ’ ಎನ್ನುತ್ತಾರೆ.೫

ಈ ಸಂಬಂಧದಲ್ಲಿ ಕಾಲ್ಡ್‌ವೆಲ್ ಅವರು ತಮ್ಮ ದ್ರಾವಿಡ ವ್ಯಾಕರಣದಲ್ಲಿ (ಪುಟ ೪೦೦ ಮತ್ತು ೬೦೦-೬೧೨) ಬರೆದಿರುವುದನ್ನೂ ನೋಡಬಹುದು.

ಹೀಗೆ, ಈ ಶಬ್ದವನ್ನು √ ಅತ್ತ್*—, ಅತ್ತಿ, ಎಂಬುದರಿಂದ ನಿರ್ವಚಿಸಬೇಕೇ ಹೊರತು, ಅಟ್ಟಿ, ಅರ್ಥಿ ಎಂಬುದರಿಂದ ನಿರ್ವಚಿಸಲಾಗುವುದಿಲ್ಲ. ಏಕೆಂದರೆ, ಪಂಪನು ಅತ್ತಿಗೆ ಎಂಬ ಮಾತನ್ನು ಉಪಯೋಗಿಸಿದ್ದಾನೆ. ‘ ತ್ತಿ ’ ಎಂಬುದು ಪ್ರಾಸಸ್ಥಾನದಲ್ಲಿ ಬಂದು ನಿರ್ವಿವಾದವಾಗಿದೆ. ಅದನ್ನು ಅವನು ಅಟ್ಟಿಗೆ ಎಂದು ಬರೆದಿರಲಾರನು. ಕೇಶಿ ರಾಜನ ಕಾಲಕ್ಕೆ (೧೫೦) ಅಟ್ಟಿ ಹೋಗಿ ಅರ್ತಿಯಾಗಿತ್ತು. ಅದನ್ನು ಅವನು ‘ಅಬದ್ಧ’ ವೆಂದು ಹೇಳಿದನು. ಆ ‘ ಅಬದ್ಧ ’ವೇ ಮುಂದಕ್ಕೆ ಹೋಗಿ ‘ ಅರ್ಥಿ ’ಯಾಯಿತು. ಪಕ್ಕಕ್ಕೆ ತಿರುಗಿ ‘ ಅಳ್ತಿ ’ಯಾಯಿತು—‘ ಅತ್ತಿ ’ಯಾಯಿತೋ ಇಲ್ಲವೋ ! ಗಟ್ಟಿ ಗರ್ದೆಯಾಗಿ ಗದ್ದೆಯಾಯಿತು. ಅರ್ಥಿಕೆಯಂತೂ ಹಿಂದು ಹಿಂದಕ್ಕೆ ಹೆಜ್ಜೆಯಿಟ್ಟು ಅಟ್ಟಿಗೆ ಅತ್ತಿಗೆ ಅತ್ತಿಗೆ ಆಗಲಾರದು.೬

‘ ಅತ್ತಿಗೆ ’ಗೆ ಅಣ್ಣನ ಹೆಂಡತಿ ಎಂಬ ಅರ್ಥದ ಜೊತೆಗೆ ತನ್ನ ಪ್ರಿಯೆ, ಹೆಂಡತಿ, ಎಂಬ ಅರ್ಥವೂ ಬರಬಹುದೇ, ಹೇಗೆ ಬಂತು, ಎಂಬುದು ಮುಂದಿನ ಪ್ರಶ್ನೆ. ಪಂಪ ಪೊನ್ನರ ಪ್ರಯೋಗಗಳು ಹೆಚ್ಚು ಕಡಮೆ ಒಂದೇ ಆಗಿರುತ್ತವೆ. ಅವುಗಳಲ್ಲಿ ಒಂದೇ ಅರ್ಥ ಹೇಳಬೇಕು. ಅವರು ಸಮಕಾಲೀನರು. ಇಬ್ಬರೂ ಅವರ ಕಾಲದಲ್ಲಿದ್ದ ಗಾದೆಯಂಥ ಹಳೆಯ ರೂಢಿಯ ಮಾತನ್ನು ಎತ್ತಿಕೊಂಡಿರಬಹುದು. ಪೊನ್ನನೇ ಪಂಪನನ್ನು ಅನುಸರಿ ಸಿರಬಹುದು. ಇಂಥ ವಾಕ್ಯಗಳೂ ‘ ಅತ್ತಿಗೆ ’ಗೆ ಈ ಅರ್ಥವಿರುವ ಪ್ರಯೋಗಗಳೂ ಮತ್ತೆ ಲ್ಲಿಯೂ ಈಗ ದೊರೆತಿಲ್ಲ. ‘ ಅಟ್ಟಿಗ ’ ಎಂಬ ಪದವು ಕ್ರಿ. ಶ. ಸುಮಾರು ೧೦೮೧ನೆಯ ವರ್ಷದ ಒಂದು ಶಾಸನದಲ್ಲಿ ಬರುತ್ತದೆ. ಇದರ ಆಧಾರದಮೇಲೆ ‘ ಅಟ್ಟಿಗೆ ಎಂಬ ರೂಪವೂ ಆಗಲಿ ಎಂದು ಸಾಧಿಸುವುದು ಸರಿಯಲ್ಲ ; ಹನ್ನೊಂದನೆಯ ಶತಮಾನದಲ್ಲಿ ಅಟ್ಟಿಗ ಅಟ್ಟಿಗೆ ಎಂಬ ರೂಪಗಳಿದ್ದರೂ ಅದರ ಹಿಂದಿನ ಶತಮಾನದಲ್ಲಿ ಅವಕ್ಕೆ ಅತ್ತಿಗ ಅತ್ತಿಗೆ ಎಂಬ ರೂಪಗಳು ಇರುವುದು ಸಾಧ್ಯವಿಲ್ಲ.

ಇನ್ನು, ಮಲಬಾರ್ ಪ್ರಾಂತದಲ್ಲಿ ರೂಢವಾಗಿರುವ ಮರುಮಕ್ಕತ್ತಾಯಂ ಪದ್ಧತಿ ಯನ್ನೂ ಪಾರ್ಸಿಯರ ಪದ್ಧತಿಯನ್ನೂ ಇಲ್ಲಿಗೆ ಹೊಂದಿಸುವುದು ಸಮಂಜಸವಾಗಿ ಕಾಣುವು ದಿಲ್ಲ. ಪಂಪನ ಕಾಲಕ್ಕೆ ಮತ್ತು ಅದಕ್ಕೂ ಹಿಂದಿನಿಂದ ಕರ್ಣಾಟಕದಲ್ಲಿ ಈ ಸಂಪ್ರದಾಯ

೫ ಕುಟ್ಟನ್ಯಂಚೇತ್ಯನುಗತ್ಯೈಃ-ದಶರೂಪಕ, ೨-೧೦೪ ; ಸಾಹಿತ್ಯದರ್ಪಣ, ೬-೧೫೬.
೬ ಪ್ರಾಚೀನ ಸಂಸ್ಕೃತದಲ್ಲಿ ‘ ಱ ’ಕಾರವಿತ್ತೆಂದು ಬೇಕಾದರೆ ಒಪ್ಪಿಕೊಳ್ಳೋಣ.

ಗಳು ರೂಢಿಯಾಗಿದ್ದಿರಲಾರವು. ಪ್ರಾಚೀನಕಾಲದಲ್ಲಿ ರೂಢಿಯಾಗಿದ್ದ, ಅತ್ತಿಗೆಯನ್ನು ಮೈದುನನು ಹೆಂಡತಿ ಮಾಡಿಕೊಳ್ಳುವ, ಪದ್ಧತಿಗೂ ಇದಕ್ಕೂ ಏನಾದರೂ ಸಂಬಂಧ ಉಂಟೋ ಏನೋ! ಈ ಪದ್ಧತಿ ಹಳೆಯದೆಂಬುದನ್ನು ಮಹಾಭಾರತ, ರಾಮಾಯಣ ಚರಿತ್ರೆಗಳಿಂದ ಊಹಿಸಬಹುದು: ದ್ರೌಪದಿಯನ್ನು ಮೊದಲು ಯುಧಿಷ್ಠಿರನು ಮದುವೆಯಾಗುತ್ತಾನೆ; ಮರುದಿನ ಅವಳನ್ನು ಭೀಮನೂ ಆ ಮರುದಿನ ಅರ್ಜುನನೂ ಹೀಗೆ ಐದು ದಿನ ಅವಳನ್ನು ಐದು ಜನ ಅನುಕ್ರಮವಾಗಿ ಮದುವೆಯಾಗುತ್ತಾರೆ. ಭೀಮಾರ್ಜುನ ನಕುಲ ಸಹದೇವರಿಗೆ ಮದುವೆಯಾದಾಗ ದ್ರೌಪದಿಯು ಅತ್ತಿಗೆಯೇಯೆ. ಇದು ಸರಿಯೆಂದು ಸಮರ್ಥಿಸಲು ಆಮೇಲೆ ಏನೇನೋ ಕಥೆಗಳು ಹುಟ್ಟಿಕೊಂಡಿವೆ. ಸೀತೆಯು ಲಕ್ಷ್ಮಣನನ್ನು ಕಾಡಿನಲ್ಲಿ ಕಟುವಾಗಿ ಬೈದದ್ದಕ್ಕೂ ಸುಗ್ರೀವನು ವಾಲಿಯ ಹೆಂಡತಿಯನ್ನು ಮದುವೆಯಾದದ್ದಕ್ಕೂ ಚಂದ್ರಗುಪ್ತನು ತನ್ನ ಅಣ್ಣ ರಾಮಗುಪ್ತನ ಹೆಂಡತಿಯನ್ನು ಮದುವೆಯಾದದ್ದಕ್ಕೂ ಈ ಪದ್ಧತಿಯ ಆಧಾರವಿದ್ದಿರಬೇಕು.

ವೇದಯುಗದಲ್ಲಿ ಮದುವೆಯ ಪದ್ಧತಿಯು ಇಂದಿರುವುದಕ್ಕಿಂತ ಭಿನ್ನವಾಗಿತ್ತು. ಪಾರ್ಸಿ ಜನರಲ್ಲಿ ಅಣ್ಣ ತಂಗಿ ಮದುವೆಯಾಗುವ ಪದ್ಧತಿ ಇದ್ದರೆ ಅದೂ ವೇದಯುಗದ, ಅಥವಾ ಅದಕ್ಕೂ ಪೂರ್ವಕಾಲದ, ಅವಶೇಷ. ನಮಗೆ ಪ್ರಕೃತವಾದ ಸಂಗತಿ ಏನೆಂದರೆ, ವೈದಿಕ ಯುಗದಲ್ಲಿ ಹಿರಿಯಣ್ಣನೊಬ್ಬನು ಮಾತ್ರ ಮದುವೆಯಾಗಿ ಆಸ್ತಿಗೆಲ್ಲಾ ಹಕ್ಕುದಾರನಾಗುವುದು;[೭] ತಮ್ಮಂದಿರು ಅಣ್ಣನ ಹೆಂಡತಿಯನ್ನು ಅಣ್ಣನಂತೆಯೇ ಅನುಭವಿಸಬಹುದಾಗಿದ್ದದ್ದು.[೮] ಇದು ಕ್ರಮಕ್ರಮವಾಗಿ ವ್ಯತ್ಯಸ್ತವಾಗುತ್ತ ಬಂತು. ಅದರ ಅವಶೇಷಗಳೇ ಮೇಲೆ ಭಾರತ ರಾಮಾಯಣ ಚರಿತ್ರೆಗಳಿಂದ ಉದಾಹರಿಸಿದ ಸಂಗತಿಗಳು. ಈ ಪದ್ಧತಿಯ ಪ್ರಕಾರ ಅತ್ತಿಗೆಯು ಅಣ್ಣನ ಹೆಂಡತಿಯೂ ಹೌದು – ಇನಿಯಳಾಗಲಿ ಬಿಡಲಿ – ತನಗೆ ಹೆಂಡತಿಯಾಗಲುಳ್ಳವಳೂ ಹೌದು. ಪಂಪ ಪೊನ್ನರ ಪ್ರಯೋಗಕ್ಕೆ ಈ ಅರ್ಥ ಹಿನ್ನೆಲೆಯಲ್ಲಿದ್ದಿರಬಹುದೇ? ಅದಕ್ಕೆ ಆಗಿನ ಕಾಲದಲ್ಲಿದ್ದಿರಬಹುದಾದ ಆಡಿಕೆಯ ಮಾತೇನೋ, ಪಂಪನಿಗೆ ಆಧಾರವಾಗಿದ್ದ ಭಾರತ ಪಾಠದಲ್ಲಿ ಏನಿತ್ತೋ ತಿಳಿಯದು. ಕುಮಾರ ವ್ಯಾಸನಿಗೆ (ಸು. ೧೪೦೦) ಆಧಾರವಾಗಿದ್ದ ಭಾರತವೇ ಎಷ್ಟೋ ಪ್ರಾಚೀನ ಪಾಠವೆಂದು ಹೇಳಲು ಕಾರಣವಿದೆ. ಅದಕ್ಕಿಂತ ಐನೂರು ವರ್ಷದ ಹಿಂದೆ ಇದ್ದ ಪಂಪನಿಗೆ ಇನ್ನೂ ಪ್ರಾಚೀನವಾದ ಪಾಠ ಸಿಕ್ಕಿದ್ದಿರಬೇಕು. ಕರ್ಣನು ಭಾನುಮತಿಯೊಡನೆ ನೆತ್ತಮ

---

೭ ನಂಬೂದರಿ ಬ್ರಾಹ್ಮಣರಲ್ಲಿ ಇಂದಿಗೂ ಹಿರಿಯಮಗನೊಬ್ಬನೇ ವಿಧಿವಿಹಿತವಾಗಿ ಮದುವೆಯಾಗುವುದು. ಅವನ ತಮ್ಮಂದಿರು ನಾಯರ್ ಹುಡುಗಿಯರನ್ನು 'ಸಂಬಂಧ' ಮಾಡಿಕೊಳ್ಳುತ್ತಾರೆ. Marriage and Family in India by K. M. Kapadia,, pp. 221—223. ತಿನ್ನವೆಲ್ಲಿಯ ವೆಲ್ಲಾಳರು ಅತ್ತಿಗೆಯನ್ನು 'ವರಿಸೆಯಾರ್' ಎನುತ್ತಾರಂತೆ. 'ವರಿಸೆ'ಯೆಂದರೆ ಅನುಕ್ರಮ.

೮ The Vedic data show that only the eldest son had the right to marry and inherit all the property. Modern kinship terms and certain kinship usages confirm this conjecture. The younger brothers were allowed access to the wife or wives of the eldest brother, and if a younger brother married, he sinned against his brother — A. B. O. R. I. Vol. XX page 223. ತಿಬೆಟ್‌ನಲ್ಲಿಯೂ ಹಿಮಾಲಯ ಪ್ರಾಂತದ ಖಾಸಿಯ ಜನರಲ್ಲಿಯೂ ಈಗಲೂ ಈ ಪದ್ಧತಿ ಇದೆಯಂತೆ. — ಅದೇ ಪುಟ ೨೨೩.

Marriage and Family in India by K. M. Kapadia, ch. IV,

ನಾಡಿದ ಸಂಗತಿಗೂ (೯–೬೯) ಹೀಗೆಯೇ ಉಪಪತ್ತಿ ಹೇಳಬಹುದು. ದುರ್ಯೋಧನನು ಕರ್ಣನನ್ನು ಸಾಮಂತನಂತೆ ಕಾಣುತ್ತಿರಲಿಲ್ಲ; ಸ್ನೇಹಿತನಂತೆ, ತಮ್ಮನಂತೆ,– ತಮ್ಮನಿಗಿಂತ ಹೆಚ್ಚಾಗಿ – ಕಾಣುತ್ತಿದ್ದನು. ತಮ್ಮನಿಗೆ (=ದೇವರ<ದೀವ್) ಅತ್ತಿಗೆಯೊಡನೆ ತುಂಬ ಸಲಿಗೆ ಇತ್ತು ; ಅವನು ಆವಳೊಡನೆ ದ್ಯೂತವಾಡಬಹುದಾಗಿತ್ತು, ಸರಸವಾಡಬಹುದಾಗಿತ್ತು, ಹಾಸ್ಯಪರಿಹಾಸ್ಯ ಮಾಡಬಹುದಾಗಿತ್ತು [೯]. ಇದಕ್ಕೂ ಹಾಗೆಯೇ ಯಾವ ಪ್ರಾಚೀನ ಪಾಠವೋ ದಂತಕಥೆಯೋ, ಮೂಲವಾಗಿದ್ದಿರಬೇಕು. ಮಹಾಭಾರತವು ಧರ್ಮಗ್ರಂಥವೆನ್ನಿಸಿಕೊಂಡು, ಅನುಶಾಸನಪರ್ವ ಪ್ರತ್ಯೇಕವಾಗಿ, ಬೆಳೆದಮೇಲೆ, ಆಂದಂದಿಗೆ ವಿಕಾರವೆಂದು ತೋರಿದ ಕೊಂಕುಗಳನ್ನೆಲ್ಲಾ ತಿದ್ದುತ್ತ, ಸಮರ್ಥಿಸುತ್ತ ಬಂದಿರಬೇಕು.

ತೆಲುಗಿನಲ್ಲಿಯೂ ತಮಿಳಿನಲ್ಲಿಯೂ 'ಅಣ್ಣನ ಹೆಂಡತಿ' ಎಂಬುದಕ್ಕೆ ಅಣ್ಣ ತಮ್ಮ ಅಕ್ಕ ತಂಗಿ ಎಂಬಂತೆ ದ್ರಾವಿಡ ಶಬ್ದವಿಲ್ಲದೆ ಮರಾಠಿಯಿಂದ ಎರವಲು ತೆಗೆದುಕೊಂಡಿದ್ದು, ಕನ್ನಡದಲ್ಲಿ ಮಾತ್ರ 'ಅತ್ತಿಗೆ' ಎಂಬ ಶಬ್ದವಿದ್ದು ಅದಕ್ಕೆ ಪ್ರಾಚೀನಕಾಲದಲ್ಲಿ 'ಅಣ್ಣನ ಹೆಂಡತಿ' ಎಂಬ ಅರ್ಥಕ್ಕಿಂತ ತನ್ನ ಇನಿಯಳು, ಹೆಂಡತಿಯಂತೆ ನಡೆದುಕೊಳ್ಳತಕ್ಕವಳು, ಎಂಬ ಅರ್ಥವಿದ್ದರೆ, ದ್ರಾವಿಡರಲ್ಲಿಯೂ ಮೊದಮೊದಲು ಮೇಲೆ ಹೇಳಿದ ವೈದಿಕಕಾಲದ ಸಾಮಾಜಿಕ ಪದ್ಧತಿಯೇ ಇದ್ದಿತೇನೋ ಎಂಬ ಊಹೆಗೆ ಅವಕಾಶವಾಗುತ್ತದೆ.

ನನ್ನ ಚರ್ಚೆಯ ಸಾರಾಂಶವಿಷ್ಟು : 'ಅತ್ತಿಗೆ' ಎಂಬುದು ಒಂದೇ ಮಾತು ; ಅತ್ತಿಗೆ$_1$ ಅತ್ತಿಗೆ$_2$ ಇಲ್ಲ. ಅದಕ್ಕೆ ಅಣ್ಣನ ಹೆಂಡತಿ ಎಂಬುದು ಮೊದಲ ಅರ್ಥ ; [೧೦] ತನ್ನ ಹೆಂಡತಿಯಂತೆ ವರ್ತಿಸಲು ತಕ್ಕವಳು ಎಂಬುದು ಅದರಿಂದ ಬಂದ ಲಕ್ಷಣಾರ್ಥ. ಈ ಶಬ್ದಕ್ಕೆ ಮೂಲ 'ಅಟ್ಟು'ಯಾಗಲಾರದು ; 'ಅತ್ತು'* (=ದೊಡ್ಡ) ಎಂಬುದಿರಬೇಕು; (ಹಾಗಾದರೆ 'ಅತ್ತಿ' 'ಅತ್ತಳ' 'ಅತ್ತಪರ' 'ಅತ್ತಲಗ' ಮುಂತಾದ ಮಾತುಗಳಿಗೂ ಸಮಂಜಸವಾದ ನಿರುಕ್ತಿ ಹೇಳಬಹುದು.) ಇದು ದ್ರಾವಿಡ ಶಬ್ದ : ಪ್ರಾಕೃತದಲ್ಲಿಯೂ ನಾಟ್ಯದಲ್ಲಿಯೂ ಹೆಚ್ಚು ಬಳಕೆಯಾಗಿದ್ದು, ಆ ಮೂಲಕ ಸಂಸ್ಕೃತಕ್ಕೆ ಹೋಗಿರಬೇಕು ; ಹಿರಿಯಾಕೆ—ಎಂದರೆ ಮುಖ್ಯವಾಗಿ ಅಕ್ಕ, ತಾಯಿ—ಎಂಬುದು ಅಲ್ಲಿ, ಅದರ ಅರ್ಥ. ಗಂಡನ ಮತ್ತು ಹೆಂಡತಿಯ ದೃಷ್ಟಿಯಿಂದ, ಅಕ್ಕ ತಾಯಿಯರ ಸಂಬಂಧವುಳ್ಳ ಇತರ ಹೆಣ್ಣುನೆಂಟರ ಅರ್ಥವೂ ಆಮೇಲೆ ಬಳಕೆಗೆ ಬಂದಿರಬೇಕು.

---

೯ ಅದೇ. ಪುಟ ೨೨೫.

ಕೋ ವಾಂ ಶಯುತ್ರಾ ವಿಧವೇವ ದೇವರಂ . . . . . (ದೇವರಃ ಕಸ್ಮಾತ್, ದ್ವಿತೀಯೋ ವರ ಉಚ್ಯತೇ) ವಿಧವಾ ವಿಧಾತೃಕಾ ಭವತಿ. ದೇವರೋ ದೀವ್ಯತಿಕರ್ಮಾ ॥ ನಿರುಕ್ತ - ನೈಘಂಟುಕ-೩-೧೫.

ಶಯುತ್ರಾ = ಶಯನೇ ; ದೇವರ ಇತ್ಯೇಷ ಶಬ್ದೋ 'ದೀವ್ಯತಿಕರ್ಮಾ' ದೀವ್ಯತ್ಯರ್ಥಃ. ಸ ಹಿ ಭರ್ತುರ್ಭ್ರಾತಾ ನಿತ್ಯಮೇವ ತಯಾ ಭ್ರಾತೃಭಾರ್ಯಯಾ ದೇವನಾರ್ಥಂ ವ್ರಿಯತ ಇತಿ ದೇವರ ಇತ್ಯುಚ್ಯತೇ—ವ್ಯಾಖ್ಯಾನ.

It refers to the Indo-European practice of the *Niyoga*—Sarup, page 48, Vide E. R E. on *Niyoga*.

೧೦ ಹೆಂಡತಿಯ ಅಕ್ಕ ಎಂಬ ಅರ್ಥದಲ್ಲಿ ಬಂಧುವರ್ಮನು (ಸು. ೧೨೦೦) ಈ ಮಾತನ್ನು ಪ್ರಯೋಗಿಸಿರುವಂತಿದೆ.—ಜೀವ ಸಂಬೋಧನೆ ೭-೪.

[ಇದಿಷ್ಟನ್ನೂ, ಈಗ ಅಚ್ಚಾಗಿರುವ ಪಂಪಭಾರತ ಶಾಂತಿಪುರಾಣಗಳ ಪಾಠವು ಸರಿಯೆಂದು ಇಟ್ಟುಕೊಂಡು ಬರೆದುದಾಗಿದೆ. ಪಂಪಭಾರತದ ಮೊದಲ ಮುದ್ರಣದಲ್ಲಿ 'ಅಬ್ಬೆಯೆಂಬತ್ತಿಗೆಯೆಂಬ ಮಾತನೆಲಗೇ ಎನಲಕ್ಕುಮೊ ಪಂಕಜಾನನೇ' ಎಂದಿದೆ. ಈ ಗ್ರಂಥಗಳಿಗೆ ಹೆಚ್ಚು ಓಲೆಯ ಪ್ರತಿಗಳು ದೊರೆಯದೆ ಅನೇಕ ಕಡೆ ಪಾಠ ಸಂದಿಗ್ಧವಾಗಿದೆ ಎಂಬುದು ತಿಳಿದ ವಿಷಯ.]

ಎ. ಆರ್. ಕೃಷ್ಣಶಾಸ್ತ್ರೀ.

# ಸಂಪಾದಕೀಯ

## ಕನ್ನಡ ರಾಜ್ಯೋದಯ ಮಹೋತ್ಸವ – ಪರಿಷತ್ತಿನಲ್ಲಿ ಸಮಾರಂಭ

ಸುಮಾರು ೩ಕೋಟಿ ಕನ್ನಡ ಜನರ ಭಾಷೆ, ಸಾಹಿತ್ಯ, ಸಂಸ್ಕೃತಿ, ವ್ಯಾಪಾರ, ವ್ಯವಹಾರ, ರಾಜಕೀಯ, ಕೈಗಾರಿಕೆ ಇತ್ಯಾದಿ ಸರ್ವಾಂಗೀಣ ಪ್ರಗತಿಗೆ ಸಾಧಕವಾದ ಕರ್ಣಾಟಕ ರಾಜ್ಯ ಅಥವಾ ವಿಶಾಲ ಮೈಸೂರು ತಾರೀಖು ೧–೧೧–೧೯೫೬ನೇ ಶುಭದಿನ ದೇವರ ಕೃಪೆಯಿಂದ ಸ್ಥಾಪನೆಯಾಗಿದೆ. ಕರ್ಣಾಟಕ ರತ್ನಸಿಂಹಾಸನಾಧೀಶ್ವರರೂ, ಕನ್ನಡ ನಾಡು ನುಡಿಗಳ ಅಭಿಮಾನಿಗಳೂ ಆದ ಶ್ರೀಮನ್ಮಹಾರಾಜರು ಜಯಚಾಮರಾಜ ಒಡೆಯರು, ಕರ್ಣಾಟಕ ರಾಜ್ಯಪಾಲರಾಗಿರುವುದು, ಕರ್ಣಾಟಕ ಏಕೀಕರಣಕ್ಕಾಗಿ ಅಪಾರ ವಾಗಿ ಶ್ರಮಿಸಿದ ಮಾನ್ಯ ಶ್ರೀ ಎಸ್. ನಿಜಲಿಂಗಪ್ಪನವರು ವಿಶಾಲ ಮೈಸೂರಿನ ಮುಖ್ಯ ಮಂತ್ರಿಗಳಾಗಿರುವುದು ಎಲ್ಲರಿಗೂ ಸಂತೋಷವನ್ನುಂಟುಮಾಡಿದೆ. ನಾಡು ನುಡಿಗಳ ಉಜ್ಜ್ವಲಾಭಿಮಾನಿಗಳು ಮಂತ್ರಿಮಂಡಲದಲ್ಲಿ ಕಂಗೊಳಿಸುತ್ತಿದ್ದಾರೆ. ಇನ್ನುಮುಂದೆ ಕರ್ಣಾಟಕದ ಸರ್ವಾಂಗೀಣ ಪ್ರಗತಿಯಾಗಬಹುದೆಂದು ನಾವು ನಂಬಬಹುದಾಗಿದೆ. ವಿಶಾಲ ಮೈಸೂರಿನ ರಾಜ್ಯಪಾಲರು, ಮುಖ್ಯಮಂತ್ರಿಗಳು, ಮಂತ್ರಿವರ್ಯರು ಇವರೆಲ್ಲರಿಗೂ ನಾವು ಹುತ್ಪೂರ್ವಕವಾದ ಸ್ವಾಗತವನ್ನು ಬಯಸುತ್ತೇವೆ. ತಾರೀಖು ೧–೧೧–೫೬ರಿಂದ ಐದುದಿನ ಪರ್ಯಂತವಾಗಿ ಪರಿಷನ್ಮಂದಿರದಲ್ಲಿ ಸಂಗೀತ, ಸಾಹಿತ್ಯ – ನಾಟಕ, ಕಾವ್ಯ ವಾಚನ, ಉಪನ್ಯಾಸ ಮೊದಲಾದ ಕಾರ್ಯಕ್ರಮಗಳಾದುವು. ಮಾನ್ಯ ನಿಜಲಿಂಗಪ್ಪ ಶ್ರೀ ಎಚ್. ಎಸ್. ರುದ್ರಪ್ಪ, ಶ್ರೀ ಟಿ. ಸುಬ್ರಹ್ಮಣ್ಯಂ, ಡಾ|| ನಾಗನಗೌಡ, ನ್ಯಾಯ ಮೂರ್ತಿ ಹೊಂಬೇಗೌಡ, ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಅವರು ಪರಿ ಷತ್ತಿಗೆ ಆಗಮಿಸಿ ಉತ್ಸವವನ್ನು ಯಶಸ್ವಿಗೊಳಿಸಿದರು.

## ಭಾರತದ ಉನ್ನತಾಧಿಕಾರಗಳಲ್ಲಿ ಕನ್ನಡಿಗರು

ಭಾರತ ಸರ್ಕಾರದವರು ೧೯೫೭ನೇ ಮೇ ೧೫ರಿಂದ ಈಗ ಲೆಫ್ಟನೆಂಟ್ ಜನರಲ್ಲರಾಗಿ ರುವ ಶ್ರೀ ಕೆ. ಎಸ್. ತಿಮ್ಮಯ್ಯನವರನ್ನು ಭಾರತದ ಶ್ರೇಷ್ಠ ಸೈನ್ಯಾಧಿಕಾರಿಗಳನ್ನಾಗಿ ನಿಯಾಮಕ ಮಾಡಿರುವರೆಂಬುದನ್ನು ಕೇಳಿ ನಮಗೆ ಸಂತೋಷವಾಗಿದೆ. ಶ್ರೀ ತಿಮಯ್ಯ ನವರು ಕೊಡಗಿನ ಕನ್ನಡಿಗರು, ಪ್ರಖ್ಯಾತ ಯುದ್ಧವಿದ್ಯಾನಿಪುಣರು. ಕಾಶ್ಮೀರದಲ್ಲಿ, ಕೊರಿಯಾದಲ್ಲಿ, ಅಸ್ಸಾಂನಲ್ಲಿ ಶ್ರೀ ತಿಮ್ಮಯ್ಯನವರು ತೋರಿಸಿದ ಪರಾಕ್ರಮ, ಸಮಯ ಸ್ಫೂರ್ತಿ, ರಾಜನೀತಿ ಎಲ್ಲರ ಮೆಚ್ಚುಗೆಗೂ ಪಾತ್ರವಾಗಿವೆ. ಕನ್ನಡ ಮಾತೆಯ ಸುಪುತ್ರರಾದ ಶ್ರೀ ಕೆ. ಎಸ್. ತಿಮ್ಮಯ್ಯನವರಿಗೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳು. ಕನ್ನಡಿಗರಾದ ಜನರಲ್ ಕಾರ್ಯಪ್ಪನವರು ಅಲಂಕರಿಸಿದ್ದ ಸ್ಥಾನವೇ ಜನರಲ್ ತಿಮ್ಮಯ್ಯ ನವರಿಗೂ ದೊರಕಿದುದು ಯಾವ ಕನ್ನಡಿಗರನ್ನು ತಾನೇ ಆನಂದಗೊಳಿಸದು ?

ಯಾವುದೇ ಒಂದು ಪ್ರಾಂತ ಸರ್ವತೋಮುಖವಾದ ಅಭಿವೃದ್ಧಿಯನ್ನು ಹೊಂದಲು ಕೇಂದ್ರದಲ್ಲಿ ಅದರ ಪ್ರತಿನಿಧಿಗಳು ತಕ್ಕಮಟ್ಟಿಗೆ ಇರುವದು ಅಗತ್ಯ. ಈ

ದೃಷ್ಟಿಯಿಂದ ಕೇಂದ್ರ ಸರಕಾರದಲ್ಲಿ ಮಂತ್ರಿಗಳಾಗಿರುವ, ಮಾನ್ಯ ಶ್ರೀ ಡಿ. ಪಿ. ಕರಮರಕರ, ಮಾನ್ಯ ಶ್ರೀ ಬಿ. ಎನ್. ದಾತಾರ, ಮಾನ್ಯ ಶ್ರೀ ಕೆ. ಸಿ. ರೆಡ್ಡಿ; ರಾಜ್ಯ ಸಭೆಯ ಉಪಾಧ್ಯಕ್ಷರಾಗಿರುವ ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು, ಬಿಹಾರದ ರಾಜ್ಯಪಾಲರಾಗಿರುವ ಮಾನ್ಯ ಶ್ರೀ ಆರ್. ಆರ್. ದಿವಾಕರರು ಇವರೆಲ್ಲರೂ ಕನ್ನಡಿಗರ ಮನ್ನಣೆಗೆ ಪಾತ್ರರಾಗಿದ್ದಾರೆ. ಕನ್ನಡಿಗರ ಭಾಷೆ, ಸಂಸ್ಕೃತಿಗಳ ಅಭಿವೃದ್ಧಿಯ ವಿಚಾರ ದಲ್ಲಿ ಈ ಮಹನೀಯರೆಲ್ಲರೂ ಪರಿಷತ್ತಿಗೆ ಬೆಂಬಲಿಗರಾಗಿ ನಿಂತು ಉಪಕಾರ ಮಾಡುವ ರೆಂದು ನಾವು ನಂಬಿರುತ್ತೇವೆ.

## ಕಣ್ಮರೆಯಾದ ಹುಲ್ಲೂರು ಶ್ರೀನಿವಾಸ ಜೋಯಿಸರು

ಚಿತ್ರದುರ್ಗದ ವಕೀಲರೂ ಇತಿಹಾಸ ಸಂಶೋಧಕರೂ ಅನೇಕ ಸಂಘ ಸಂಸ್ಥೆಗಳ ಸದಸ್ಯರೂ, ಕನ್ನಡ ಸಾಹಿತ್ಯ ಪರಿಷತ್ತಿನ ಉಜ್ಜ್ವಲಾಭಿಮಾನಿಗಳೂ ಆಗಿದ್ದ ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ತಾ॥ ೮-೧೧-೫೮ ರ ದಿನ ಚಿತ್ರದುರ್ಗದ ತಮ್ಮ ನಿವಾಸದಲ್ಲಿ ದಿವಂಗತರಾದರೆಂದು ಕೇಳಿ ನಾವು ದುಃಖಿಸುತ್ತೇವೆ. ಮರಣಕಾಲದಲ್ಲಿ ಶ್ರೀಯುತರಿಗೆ ೬೫ ವರ್ಷ ವಯಸ್ಸಾಗಿತ್ತು. ಮೃತರಿಗೆ ೩ ಜನ ಪುತ್ರರು ೧ ಪುತ್ರಿ ೨ ಸಹೋದರರು ೧ ಸಹೋದರಿಯರು ಇದ್ದಾರೆ. ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ನಿಷ್ಠಾವಂತ ಕಾಂಗ್ರೆಸ್ ಭಕ್ತರು. ಕರ್ನಾಟಕ ಏಕೀಕರಣದ ಉಜ್ಜ್ವಲಾಭಿಮಾನಿಗಳು ನುರಿತ ಪತ್ರಿಕೋದ್ಯೋಗಿಗಳು, ಅತ್ಯಂತ ಸತ್ಯಸಂಧರು, ಸ್ನೇಹಪರರು ಎನಿಸಿಕೊಂಡಿದ್ದರು. ಇತಿ ಹಾಸ ಸಂಶೋಧನೆಯಲ್ಲಿ ಅವರಿಗೆ ತೀವ್ರವಾದ ಆಸಕ್ತಿ ಇತ್ತು. ಚಿತ್ರದುರ್ಗದಲ್ಲಿರುವ ಪ್ರಾಚೀನ ವಸ್ತು ಸಂಗ್ರಹಾಲಯ ಅವರ ಪ್ರಯತ್ನದ ಫಲವಾಗಿರುವದು. ಅವರಂತಹ ನಿಃಸ್ವಾರ್ಥ ದೇಶಸೇವಕರನ್ನು ಕಾಣುವುದು ಅಪರೂಪ. ಅವರು ಬರೆದಿರುವ ವಿದ್ವತ್ಪೂರ್ಣ ವಾದ ವಿಚಾರಪೂರ್ಣವಾದ ಲೇಖನಗಳು ನೂರಾರು ಪತ್ರಿಕೆಗಳಲ್ಲಿ ಪ್ರಕಟವಾಗಿರುವುವು. ಇದೇ ಸಂಚಿಕೆಯಲ್ಲಿರುವ "ಹೊಯ್ಸಳಾನ್ವಯ ಪ್ರತಾಪ" ಎಂಬ ಲೇಖನವನ್ನು ಮಾನ್ಯ ವಾಚಕರು ಓದಿ ಶ್ರೀ ಜೋಯಿಸರ ಇತಿಹಾಸ ಪಾಂಡಿತ್ಯವನ್ನು ಅರ್ಥಮಾಡಿಕೊಳ್ಳ ಬಹುದು, ಸಾಹಿತ್ಯ ಪರಿಷತ್ಪತ್ರಿಕೆ, ಕನ್ನಡ ನುಡಿ, ಪ್ರಬುದ್ಧ ಕರ್ನಾಟಕ, ತಾಯಿನಾಡು, ಸುಬೋಧ, ಕರ್ಮವೀರ, ಶರಣಸಾಹಿತ್ಯ ಮೊದಲಾದ ಪತ್ರಿಕೆಗಳಲ್ಲಿ ಅವರ ಲೇಖಗಳು ಬಹಳವಾಗಿ ಪ್ರಕಟವಾಗಿವೆ. ಇವರ ಲೇಖನಗಳನ್ನೆಲ್ಲ ಒತ್ತಟ್ಟಿಗೆ ಕೂಡಿಸಿ ಇವರ ಮಿತ್ರ ರಿಂದಲೂ ಕೆಲವು ಲೇಖನಗಳನ್ನು ಬರೆಸಿ ಶ್ರೀ ಬಸವನಾಳರ ಸ್ಮಾರಕ ಗ್ರಂಥದ ಮಾದರಿ ಯಲ್ಲಿ **ಹುಲ್ಲೂರು ಶ್ರೀನಿವಾಸ ಜೋಯಿಸರ ಸ್ಮಾರಕ ಗ್ರಂಥ**ವೊಂದನ್ನು ಪ್ರಕಟಿಸುವುದು ಅಗತ್ಯವಾಗಿದೆ. ಅಲ್ಲದೆ ಚಿತ್ರದುರ್ಗದಲ್ಲಿರುವ ಪ್ರಾಚೀನವಸ್ತು ಸಂಗ್ರಹಾಲಯಕ್ಕೆ ಶ್ರೀ ಜೋಯಿಸರ ಹೆಸರನ್ನು ಇಡುವದು ಕೂಡಾ ಅಗತ್ಯವಾಗಿದೆ. ಈ ಕಾರ್ಯವನ್ನು ಶ್ರೀ ಜೋಯಿಸರ ಮಿತ್ರರು, ಸರ್ಕಾರದವರ ಸಹಾಯದಿಂದ ನೆರವೇರಿಸುವರೆಂಬ ನಂಬಿಕೆ ನಮಗಿದೆ. ಭಗವಂತನು ಮೃತರ ಆತ್ಮಕ್ಕೆ ಶಾಂತಿಯನ್ನೂ, ವಿಯೋಗಿಗಳಾದ ಪುತ್ರ ಮಿತ್ರಾದಿಗಳ ಮನಸ್ಸಿಗೆ ಸಮಾಧಾನವನ್ನೂ ಉಂಟುಮಾಡಲಿ.

ಜೋಯಿಸರ ಆತ್ಮಕ್ಕೆ ಇದೋ ! ನಮ್ಮ ಶ್ರದ್ಧೆಯ ಬಾಷ್ಪಾಂಜಲಿಗಳು.

## ಮಾಜಿ ಸಮ್ಮೇಳನಾಧ್ಯಕ್ಷರ ಹಾಗೂ ಪರಿಷದಧ್ಯಕ್ಷರ ಸನ್ಮಾನ ಸಮಾರಂಭ

ಸುಮಾರು ಅರ್ಧಶತಮಾನಗಳಿಂದ ಕನ್ನಡ ನಾಡು ನುಡಿಗಳ ಅಭಿವೃದ್ಧಿಗಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಏಳಿಗೆಗಾಗಿ ಶ್ರಮಿಸಿ, ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ಪರಿಷತ್ತಿನ ಅಧ್ಯಕ್ಷರಾಗಿ ಮಿಗಿಲಾದ ಸೇವೆಯನ್ನು ಸಲ್ಲಿಸಿರುವ ಕರ್ಣಾಟಕ ಪ್ರಾಂತರಚನೆಗೆ ಬಹುಮಟ್ಟಿಗೆ ಕಾರಣಕರ್ತರೆನಿಸಿರುವ ಮಾಜಿ ಅಧ್ಯಕ್ಷ ಸಮ್ಮೇಳನಾಧ್ಯಕ್ಷರ ಸನ್ಮಾನ ಸಮಾರಂಭವನ್ನು ಪರಿಷತ್ತಿನಲ್ಲಿ ತಾರೀಖು ೧೨-೧೨-೧೯೫೬ ರಂದು ಏರ್ಪಡಿಸಲಾಗಿದೆ.

ಬಿಹಾರ ರಾಜ್ಯಪಾಲರಾದ ಮಾನ್ಯ ಶ್ರೀ ಆರ್. ಆರ್. ದಿವಾಕರರು ಸಮಾರಂಭದ ಅಧ್ಯಕ್ಷರಾಗಿರುವರು. ಮೈಸೂರು ರಾಜ್ಯಪಾಲರಾದ ಶ್ರೀಮನ್ಮಹಾರಾಜ ಜಯಚಾಮರಾಜ ಒಡೆಯರು ಉತ್ಸವವನ್ನು ಪ್ರಾರಂಭಿಸುವರು. ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಮಾಜಿ ಸಮ್ಮೇಳನಾಧ್ಯಕ್ಷರ ಭಾವಚಿತ್ರಗಳ ಪ್ರಾರಂಭೋತ್ಸವ ನಡೆಸುವರು. ಇದೇ ಸಂದರ್ಭದಲ್ಲಿ ಮಾನ್ಯ ಸಮ್ಮೇಳನಾಧ್ಯಕ್ಷರಿಗೂ ಪರಿಷದಧ್ಯಕ್ಷರಿಗೂ ಮಾನಪತ್ರಗಳನ್ನಿತ್ತು ಗೌರವಿಸಲಾಗುವುದು.

ತಾರೀಖು ೧೦-೧೨-೧೯೫೬ ರಂದು ಶ್ರೀ ದಾ. ರಾ. ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಕವಿ ಸಮ್ಮೇಳನವೂ, ತಾರೀಖು ೧೧-೧೨-೧೯೫೬ ರಂದು ಶ್ರೀ ವೈ. ನಾಗೇಶಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ವಿದ್ವದ್ಗೋಷ್ಠಿಯೂ ನಡೆಯುವುವು.

ಈ ಸಮಾರಂಭಗಳು ಕರ್ಣಾಟಕ ರಾಜ್ಯೋದಯವಾದ ಸಂತೋಷಾರ್ಥವಾಗಿ ಪರಿಷತ್ತಿನಲ್ಲಿ ನಡೆಯತಕ್ಕುವೆಂಬುನ್ನು ಹೇಳಬೇಕಾಗಿಲ್ಲವಷ್ಟೆ ?

## ಕರ್ಣಾಟಕ ವಿಶ್ವವಿದ್ಯಾನಿಲಯದಲ್ಲಿ ಹಿರಿಯರಿಬ್ಬರಿಗೆ ಸನ್ಮಾನ

ವಿಶಾಲ ಮೈಸೂರಿನ ರಾಜ್ಯಪಾಲರಾದ ಶ್ರೀಮನ್ ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರ ಸಮ್ಮುಖದಲ್ಲಿ ದಿನಾಂಕ ೩-೧೨-೫೬ ರಂದು ಧಾರವಾಡದಲ್ಲಿ ಕರ್ಣಾಟಕ ವಿಶ್ವವಿದ್ಯಾನಿಲಯದ ಘಟಿಕೋತ್ಸವದ ಸಮಯದಲ್ಲಿ ಬೆಂಗಳೂರಿನ ಸುಪ್ರಸಿದ್ಧ ಸಾಹಿತಿಗಳಾದ ರಾಜಸೇವಾಪ್ರಸಕ್ತ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರಿಗೂ, ಬಿಜಾಪುರದ ಜ್ಞಾನವೃದ್ಧ ವಯೋವೃದ್ಧ ಹಿರಿಯ ಮುಖಂಡರಾದ ರಾವ್‌ಬಹದ್ದೂರ್ ಫ. ಗು. ಹಳಕಟ್ಟಿಯವರಿಗೂ 'ಡಾಕ್ಟರೇಟ್' ಪದವಿ ಪ್ರಾಪ್ತವಾಯಿತೆಂಬುದನ್ನು ಕೇಳಿ ನಮಗೆ ತುಂಬಾ ಸಂತೋಷವಾಗಿದೆ. ಅಪೂರ್ವವಾದ ಈ ಗೌರವವನ್ನು ಸಂಪಾದಿಸಿದ ಈ ಉಭಯ ಮಹನೀಯರನ್ನೂ ನಾವು ಸಾಹಿತ್ಯ ಪರಿಷತ್ತಿನ ಪರವಾಗಿ ಹಾರ್ದಿಕವಾಗಿ ಅಭಿನಂದಿಸುತ್ತೇವೆ.

ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು ೧೯೨೯ರಲ್ಲಿ ಬೆಳಗಾಂವಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದರು. ಸಾಹಿತ್ಯ ಪರಿಷತ್ತಿಗೆ (ಹಲವಾರು ವರುಷಗಳ ಕಾಲ) ಉಪಾಧ್ಯಕ್ಷರಾಗಿದ್ದು ಮಿಗಿಲಾದ ಸೇವೆಯನ್ನು ಸಲ್ಲಿಸಿದರು. ಕನ್ನಡ ನಾಡು ನುಡಿಗಳ ಏಳಿಗೆಗಾಗಿ ಬಹಳವಾಗಿ ಶ್ರಮಿಸಿರುವರು. ಕನ್ನಡದಲ್ಲಿ ಸಣ್ಣ ಕಥೆ, ನಾಟಕ, ವಿಮರ್ಶೆ, ಕಾದಂಬರಿ ಮೊದಲಾದ ರೀತಿಯ ಅನೇಕ ಗ್ರಂಥಗಳನ್ನು ರಚಿಸಿ

ಕನ್ನಡ ಸಾಹಿತ್ಯಕ್ಕೆ ಮಹೋಪಕಾರ ಮಾಡಿದ್ದಾರೆ. 'ಜೀವನ' ಎಂಬ ಮಾಸಪತ್ರಿಕೆಯನ್ನು ನಡೆಸುತ್ತಾ ಈಗಲೂ ಉತ್ಸಾಹದಿಂದ ಸಾಹಿತ್ಯ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶ್ರೀಯುತರು ಮೈಸೂರು ಸರ್ಕಾರದ ಉನ್ನತ ಅಧಿಕಾರದಲ್ಲಿದ್ದು ನಿವೃತ್ತರಾಗಿದ್ದಾರೆ. ವಿನಯಾದಿ ಸದ್ಗುಣ ಸಂಪನ್ನರೆನ್ನಿಸಿದ್ದಾರೆ. ನಾಡಿನ ಮನ್ನಣೆಗೆ ಪಾತ್ರರಾಗಿದ್ದಾರೆ.

ರಾವ್ ಬಹದ್ದೂರ್ ಫ. ಗು. ಹಳಕಟ್ಟಿಯವರು ಬಿಜಾಪುರದ ಜ್ಞಾನವೃದ್ಧ, ವಯೋವೃದ್ಧ ಸಾಹಿತಿಗಳು 'ಶಿವಾನುಭ' ಮಾಸಪತ್ರಿಕೆಯ ಸಂಪಾದಕರು, ಇತಿಹಾಸ ಸಂಶೋಧಕರು, ಕರ್ಣಾಟಕ ಏಕೀಕರಣ ಧುರೀಣರು, 'ನವ ಕರ್ಣಾಟಕ' ಮುಂತಾದ ಪತ್ರಿಕೆಗಳ ಮೂಲಕವಾಗಿ ಕನ್ನಡ ಪತ್ರಿಕಾ ಪ್ರಪಂಚಕ್ಕೆ ಹೆಚ್ಚಿನ ಸೇವೆಯನ್ನು ಸಲ್ಲಿಸಿದವರು. ಕೆಲವು ಕಾಲ ಬೊಂಬಾಯಿ ಶಾಸನ ಸಭಾ ಸದಸ್ಯರಾಗಿ, ಸರ್ಕಾರಿ ವಕೀಲರಾಗಿ ಹೆಚ್ಚಿನ ಸೇವೆಯನ್ನು ದೇಶಕ್ಕೆ ಸಲ್ಲಿಸಿರತಕ್ಕ ಮಹನೀಯರು. ಶ್ರೀಯುತರು 'ಶಿವಾನುಭವ' ಪತ್ರಿಕೆಯ ಮೂಲಕವಾಗಿಯೂ, ಗ್ರಂಥಗಳ ಮೂಲಕವಾಗಿಯೂ ನಾಡಿಗೆ ಹೆಚ್ಚಿನ ಸೇವೆಯನ್ನು ಸಲ್ಲಿಸಿದ್ದಾರೆ. ಬಸವೇಶ್ವರ ವಚನಗಳು, ಚೆನ್ನಬಸವೇಶ್ವರ ವಚನಗಳು, ಪ್ರಭುದೇವರು, ಅಕ್ಕಮಹಾದೇವಿ, ಮಡಿವಳ ಮಾಚಯ್ಯ, ಸಿದ್ಧರಾಮೇಶ್ವರ ಮೊದಲಾದವರ ವಚನಗಳು, ಶೂನ್ಯ ಸಂಪಾದನೆ, ಶಿವಾನುಭವ ಶಬ್ದಕೋಶ, ಆದಿಶೆಟ್ಟಿ ಪುರಾಣ, ಹರಿಹರನ ರಗಳೆಗಳು, ಕೃಷಿಜ್ಞಾನ ಪ್ರದೀಪಕೆ, ಶರಣರ ಹಾಡುಗಳು, ಅರ್ಜುನವಾಡ ಶಿಲಾಶಾಸನ, ಅಬಲೂರು ಶಿಲಾಶಾಸನ ಮೊದಲಾದುವುಗಳನ್ನು ಪ್ರಕಟಿಸಿ ಕನ್ನಡ ಸಾಹಿತ್ಯಕ್ಕೂ, ಇತಿಹಾಸ ಪ್ರಪಂಚಕ್ಕೂ ಮಹೋಪಕಾರ ಮಾಡಿದ್ದಾರೆ. ೧೯೨೬ರಲ್ಲಿ ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವಿಸಲ್ಪಟ್ಟಿದ್ದಾರೆ. ಇಂತಹ ಹಿರಿಯ ಸಾಹಿತಿಗಳಿಗೆ ಕರ್ಣಾಟಕ ವಿಶ್ವವಿದ್ಯಾನಿಲಯದವರು 'ಡಾಕ್ಟರೇಟ್' ಪದವಿಯನ್ನು ಕೊಟ್ಟು ಗೌರವಿಸಿರುವುದು ಕನ್ನಡ ಸಾಹಿತ್ಯ ಪರಿಷತ್ತಿಗೆ ಮಿಗಿಲಾದ ಸಂತೋಷವನ್ನುಂಟುಮಾಡಿದೆ.

ಭಾರತ ಪ್ರಭುತ್ವದಿಂದ 'ರಾವ್ ಬಹದ್ದೂರ್' ಬಿರುದನ್ನು ಪಡೆದ ಶ್ರೀ ಫ. ಗು. ಹಳಕಟ್ಟಿಯವರಿಗೂ, ಮೈಸೂರು ಶ್ರೀಮನ್ ಮಹಾರಾಜರಿಂದ 'ರಾಜಸೇವಾಪ್ರಸಕ್ತ' ಎಂಬ ಬಿರುದನ್ನು ಪಡೆದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರಿಗೂ ನಾವು ಈ ಸಂದರ್ಭದಲ್ಲಿ ಅವರಿಗೆ ಕರ್ಣಾಟಕ ವಿಶ್ವವಿದ್ಯಾನಿಲಯದವರಿಂದ ದೊರೆತಿರುವ ಈ ಅಪೂರ್ವವಾದ ಗೌರವಕ್ಕಾಗಿ ನಮ್ಮ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

## ತಾಳವಾಡಿಯಲ್ಲಿ ಗಡಿನಾಡು ಸಮ್ಮೇಳನ

ಶ್ರೀ ಭುವನೇಶ್ವರಿಯ ಕೃಪೆಯಿಂದ ದಿನಾಂಕ ೧-೧೧-೫೬ನೇ ಶುಭದಿನ ಕನ್ನಡ ರಾಜ್ಯೋದಯವಾಗಿ ಹತ್ತೊಂಬತ್ತು ಜಿಲ್ಲೆಯನ್ನು ಒಳಗೊಂಡ ವಿಶಾಲ ಮೈಸೂರು ಸಂಸ್ಥಾನವು ಸ್ಥಾಪನೆಯಾಗಿ ಸಮಸ್ತ ಕನ್ನಡಿಗರಿಗೂ ಸಂತೋಷವುಂಟಾಗಿದೆ. ಆದರೂ ಕನ್ನಡಿಗರ ಮನಸ್ಸಿಗೆ ಗಡಿನಾಡ ಕನ್ನಡ ಪ್ರದೇಶಗಳ ಬಗ್ಗೆ ಇನ್ನೂ ಕಳವಳವು ಇದ್ದೇ ಇದೆ. ವಿಶಾಲ ಮೈಸೂರಿನ ಗಡಿಗಳಲ್ಲಿರುವ ತಾಳವಾಡಿ ಫಿರ್ಕಾ ೬೦ ಹಳ್ಳಿಗಳು (ಕೊಯಮತ್ತೂರು ಜಿಲ್ಲಾ) ಕನ್ನಡ ಪ್ರದೇಶವಾದ ನೀಲಗಿರಿ ಜಿಲ್ಲಾ ಭೌಗೋಳಿಕ, ಐತಿಹಾಸಿಕ ಮತ್ತು ವ್ಯಾವಹಾರಿಕ ಕಾರಣಗಳಿಂದ ಬೆಂಗಳೂರಿಗೆ ಸೇರಬೇಕಾದಿರುವ ಹೊಸೂರು ತಾಲ್ಲೂಕು ಮೈಸೂರಿನ ಗಡಿಯ ಪಕ್ಕದಲ್ಲಿರುವ ಮಡಕಶಿರಾ ಎರಡು ಫಿರ್ಕಾ (ಅನಂತಪುರ ಜಿಲ್ಲಾ)

ಪ್ರದೇಶಗಳು. ಆದವಾನಿ ಆಲೂರು ಭಾಗಗಳ ಕನ್ನಡ ಪ್ರದೇಶಗಳು, ದಕ್ಷಿಣಸಾತಾರಕ್ಕೆ ಜತ್ತ ತಾಲ್ಲೂಕು, ಸೊಲ್ಲಾಪುರದ ಜಿಲ್ಲೆಗೆ ಸೇರಿದ ಅಕ್ಕಲಕೋಟೆ ತಾಲ್ಲೂಕು ಇತ್ಯಾದಿ ಕನ್ನಡ ಪ್ರದೇಶಗಳು, ಮಂಗಳೂರು ಜಿಲ್ಲೆಯ ದಕ್ಷಿಣ ಭಾಗದಲ್ಲಿನ ಚಂದ್ರಗಿರಿ ಹೊಳೆಯ ಮೇಲ್ಭಾಗದಲ್ಲಿರುವ ಕಾಸರಗೋಡು ತಾಲ್ಲೂಕು ಇವು ಕರ್ಣಾಟಕ ರಾಜ್ಯಕ್ಕೆ ಸೇರುವುದು ಅತ್ಯಗತ್ಯವಾಗಿದೆ. ಈ ಭಾಗದ ಜನಗಳು ತಮ್ಮ ತೌರುಮನೆಯಾದ ವಿಶಾಲ ಮೈಸೂರು ರಾಜ್ಯಕ್ಕೆ ಸೇರಲು ಚಳವಳಿ ನಡಸುತ್ತಿದ್ದಾರೆ. ಪ್ರಜಾಪ್ರಭುತ್ವದ ಇಂದಿನ ದಿವಸಗಳಲ್ಲಿ ಜನರ ಬಯಕೆಗನುಗುಣವಾಗಿ ಅವರಿಗೆ ರಕ್ಷಣೆಯನ್ನು ಕೊಡುವುದು ಪ್ರಜಾಸರ್ಕಾರದ ಕರ್ತವ್ಯವಲ್ಲವೆ?

ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ರಕ್ಷಣೆಯ ದೃಷ್ಟಿಯಿಂದ ತಾಳವಾಡಿ, ಕಾಸರಗೋಡು, ಅಕ್ಕಲಕೋಟೆ ಮುಂತಾದ ಪ್ರದೇಶಗಳು ಕನ್ನಡ ರಾಜ್ಯಕ್ಕೆ ಸೇರುವುದು ಅತ್ಯಗತ್ಯವೆಂದು ಪರಿಷತ್ತಿನ ಅಭಿಪ್ರಾಯ. ಭಾರತದ ರಾಜ್ಯಾಂಗವು ಅಲ್ಪಸಂಖ್ಯಾತ ಭಾಷೆಯವರಿಗೆ ತಕ್ಕಷ್ಟು ರಕ್ಷಣೆಯನ್ನಿತ್ತಿದೆ. ಈಮೇಲೆ ಕಂಡ ಪ್ರದೇಶಗಳು ಮೈಸೂರು ರಾಜ್ಯಕ್ಕೆ ಸೇರುವುದಿಲ್ಲವಾದರೆ ಆಯಾ ಸರ್ಕಾರಗಳು ಈ ಜನರ ಭಾಷಾ ಸ್ವಾತಂತ್ರ್ಯವನ್ನು ಸಂರಕ್ಷಿಸಬೇಕಾಗುತ್ತದೆ. ಸಾಹಿತ್ಯ ಪರಿಷತ್ತಿನ ಉದ್ದೇಶವಾದರೂ ಕನ್ನಡದ ರಕ್ಷಣೆಯೇ ಆಗಿದೆ. ಕರ್ಣಾಟಕದ ಸಾಂಸ್ಕೃತಿಕ ಏಕೀಕರಣಕ್ಕಾಗಿ ೪೨ ವರ್ಷಗಳಿಂದ ಹೋರಾಡಿರುವ ಕನ್ನಡ ಸಾಹಿತ್ಯ ಪರಿಷತ್ತು ಈ ಮೇಲೆಕಂಡ ಗಡಿನಾಡುಗಳಲ್ಲಿರುವ ಕನ್ನಡಿಗರ ಭಾಷೆ ಮತ್ತು ಸಂಸ್ಕೃತಿಗಳ ರಕ್ಷಣೆಗಾಗಿ ಕಂಕಣಕಟ್ಟಬೇಕಾಗಿರುವುದು ಅಗತ್ಯ ಮತ್ತು ಅನಿವಾರ್ಯವಾಗಿದೆ. ಕರ್ಣಾಟಕದ ಅಭಿಮಾನಿಗಳಿಂದ ತುಂಬಿತುಳುಕಾಡುತ್ತಿರುವ ಮೈಸೂರ ಸರ್ಕಾರವು ಈ ಬಗ್ಗೆ ಪ್ರಯತ್ನಿಸಿದರೆ ಕಾರ್ಯವು ಹಗುರವಾಗಬಹುದೆಂದೂ ಈ ಗಡಿನಾಡುಗಳಲ್ಲಿರುವ ಪ್ರದೇಶಗಳು ಮೈಸೂರು ರಾಜ್ಯಕ್ಕೆ ಸೇರಲು ಅನುಕೂಲವಾಗುವದೆಂದೂ ನಾವು ನಂಬುತ್ತೇವೆ.

ಈ ವಿಷಯಗಳನ್ನು ಸಾಧಿಸುವುದರ ಸಲುವಾಗಿ ದಿನಾಂಕ ೮-೧೨-೧೯೫೮ರ ದಿನ ಕೊಯಿಮತ್ತೂರ ಜಿಲ್ಲಾ ತಾಳವಾಡಿಯಲ್ಲಿ ಆ ಭಾಗದ ಕನ್ನಡಿಗರ ಸಮ್ಮೇಳನ ನೆರೆದಿದ್ದಿತು. ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಅಂದಿನ ಸಭಾಧ್ಯಕ್ಷರಾಗಿದ್ದರು. ಆ ಭಾಗದ ಎಲ್ಲ ಹಳ್ಳಿಗಳಿಂದ ಸುಮಾರು ಐದುಸಾವಿರ ಜನರು ಸೇರಿದ್ದರು. ನಂಜನಗೂಡಿನ ಪ್ರಮುಖ ವಕೀಲರಾದ ಶ್ರೀ ಹೆಜ್ಜಿಗೆ ಲಿಂಗಣ್ಣ ಅವರು ಸಮ್ಮೇಳನದ ಪ್ರಾರಂಭೋತ್ಸವವನ್ನು ನಡೆಸಿದರು. ಅಧ್ಯಕ್ಷರ ಭಾಷಣವು ಗಡಿನಾಡಿನ ಕನ್ನಡಿಗರ ಸ್ಥಿತಿಗತಿಗಳನ್ನು ಜನತೆಯ ಗಮನಕ್ಕೆ ತರುವಂತಿದ್ದಿತು. ಸಭೆಯಲ್ಲಿ ತಾಳವಾಡಿ ಫಿರ್ಕಾ ಪ್ರದೇಶವನ್ನು ವಿಶಾಲ ಮೈಸೂರು ರಾಜ್ಯಕ್ಕೆ ಸೇರಿಸಬೇಕೆಂಬ ನಿರ್ಣಯವಾಯಿತು. ಆ ನಿರ್ಣಯವನ್ನು ಮದ್ರಾಸು ಮತ್ತು ಮೈಸೂರು ಮುಖ್ಯಮಂತ್ರಿಗಳಿಗೂ, ಭಾರತ ಕಾಂಗ್ರೆಸ್ ಅಧ್ಯಕ್ಷರಿಗೂ, ಭಾರತ ಸರಕಾರಕ್ಕೂ ಕಳಿಸಿಕೊಡಲಾಯಿತು. ಒಟ್ಟಿನಲ್ಲಿ ಈ ಸಮ್ಮೇಳನವು ಗಡಿನಾಡು ಕನ್ನಡಿಗರಲ್ಲಿ ಒಳ್ಳೆಯ ಜಾಗೃತಿ ಉಂಟಾಗಿದೆ ಎಂಬುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಿತ್ತು. ಇತರ ಗಡಿನಾಡಿನವರೂ ತಾಳವಾಡಿಯವರಂತೆ ಸಮ್ಮೇಳನಗಳನ್ನು ನಡೆಸಿ ವಿಶಾಲ ಮೈಸೂರಿಗೆ ಸೇರಲು ಪ್ರಯತ್ನಿಸುವುದು ಅಗತ್ಯವಲ್ಲವೆ?

## ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರ ಘಟಿಕೋತ್ಸವ ಭಾಷಣ

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ ಸುಪ್ರಸಿದ್ಧ ಕನ್ನಡ ಸಾಹಿತಿಗಳೂ ಆದ ರಾಜಸೇವಾಪ್ರಸಕ್ತ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು ದಿನಾಂಕ ೩-೧೨-೫೭ರಂದು ಧಾರವಾಡದಲ್ಲಿ ಕರ್ಣಾಟಕ ವಿಶ್ವವಿದ್ಯಾನಿಲಯದಲ್ಲಿ ಘಟಿಕೋತ್ಸವ ಭಾಷಣವನ್ನು ಮಾಡುತ್ತ ಕನ್ನಡ ಭಾಷೆಗೂ ಮತ್ತು ದೇಶಕ್ಕೂ ಸಂಬಂಧಪಟ್ಟ ಕೆಲವು ಮನನೀಯವಾದ ಮಾತುಗಳನ್ನು ಹೇಳಿದ್ದಾರೆ. ಅವರು ಆ ತಮ್ಮ ಉಜ್ವಲವಾದ ಭಾಷಣದಲ್ಲಿ

(೧) ಭಾರತದೇಶದಲ್ಲಿ ಹಿಂದೀ ಮಾತ್ರ ರಾಷ್ಟ್ರ ಭಾಷೆಯಲ್ಲ. ಭಾರತದ ರಾಜ್ಯಾಂಗ ಒಪ್ಪಿಕೊಂಡಿರುವ ಕನ್ನಡ, ತೆಲುಗು, ಮರಾಠಿ ಮೊದಲಾದ ಇತರ ೧೪ ಭಾಷೆಗಳೂ ರಾಷ್ಟ್ರ ಭಾಷೆಗಳು. ಕೇಂದ್ರ ಸರ್ಕಾರ ಮತ್ತು ಪ್ರಾಂತ ಸರ್ಕಾರಗಳ ನಡುವೆ ನಡೆಯುವ ವ್ಯವಹಾರವು ಹಿಂದಿ ಭಾಷೆಯಲ್ಲಿ ನಡೆಯಬಹುದು. ಸರ್ಕಾರದ ಕೆಲಸಕ್ಕೆ ಸೇರುವವರು ಹಿಂದಿಯನ್ನು ಕಲಿಯಬಹುದು.

(೨) ವಿಶಾಲ ಮೈಸೂರು ರಾಜ್ಯದಲ್ಲಿ ಕರ್ಣಾಟಕ ವಿಶ್ವವಿದ್ಯಾನಿಲಯ ಮತ್ತು ಮೈಸೂರು ವಿಶ್ವವಿದ್ಯಾನಿಲಯ ಇವೆರಡೂ ಶಾಶ್ವತವಾಗಿ ಮುಂದುವರೆಯಬೇಕು. ಕಾಲೇಜುಗಳನ್ನು ನಡೆಸುವ ಅಧಿಕಾರ ಈ ವಿಶ್ವವಿದ್ಯಾನಿಲಯಗಳಿಗಿರಬೇಕು.

(೩) ಮೈಸೂರು ಸರ್ಕಾರವು ಕೋರ್ಟು, ಕಚೇರಿ, ಶಾಲೆ, ಕಾಲೇಜು, ಎಲ್ಲವನ್ನೂ ಕನ್ನಡದಲ್ಲಿ ನಡೆಸಬೇಕು.

(೪) ಇಂಗ್ಲೆಂಡಿನಲ್ಲಿ ಇಂಗ್ಲಿಷಿಗಿರುವ ಸ್ಥಾನ, ಫ್ರಾನ್ಸ್‌ನಲ್ಲಿ ಫ್ರೆಂಚಿಗಿರುವ ಸ್ಥಾನ ಕರ್ಣಾಟಕದಲ್ಲಿ ಕನ್ನಡಕ್ಕಿರಬೇಕು ಎಂದು ಶ್ರೀ ಮಾಸ್ತಿಯವರು ಹೇಳಿರುವುದನ್ನು ನಾವು ಸಂಪೂರ್ಣವಾಗಿ ಅನುಮೋದಿಸುತ್ತೇವೆ. ಭಾಷಾವಾರು ರಾಜ್ಯಗಳ ಚಳುವಳಿಯು ಜನರ ಬಳಕೆಯ ಭಾಷೆಯಲ್ಲಿಯೇ ನಡೆಯಬೇಕೆಂಬ ತತ್ವಕ್ಕಾಗಿಯೇ ನಡೆದಿದೆ. ಈ ದೃಷ್ಟಿಯಿಂದ ಕನ್ನಡ ನಾಡಿನಲ್ಲಿ ಕನ್ನಡ ಭಾಷೆಯಲ್ಲಿ ನಡೆಯುವುದು, ಕರ್ಣಾಟಕದ ಶಾಲೆ ಕಾಲೇಜುಗಳಲ್ಲಿ ಕನ್ನಡಕ್ಕೆ ಪ್ರಾಮುಖ್ಯತೆ ಇರುವದು ಎಲ್ಲರೂ ಒಪ್ಪತಕ್ಕ ಮಾತು. ಕೋಟಿ ಕೋಟಿ ಕನ್ನಡ ಜನರ ಅಂತರಂಗದ ಬಯಕೆಯನ್ನೇ ಈ ಘಟಿಕೋತ್ಸವದಲ್ಲಿ ಮಾನ್ಯ ಮಾಸ್ತಿಯವರು ಬಹಿರಂಗವಾಗಿ ಹೇಳಿದ್ದಾರೆಂದು ಅನ್ನಬಹುದು.

ಇನ್ನು ಭಾಷಾವಾರು ಚಳುವಳಿಯ ಆಧಾರದಮೇಲೆ ನಿರ್ಮಾಣವಾಗಿರುವ ವಿಶಾಲ ಮೈಸೂರು ರಾಜ್ಯದಲ್ಲಿ ಸರ್ಕಾರದ ಕೋರ್ಟು ಕಚೇರಿಗಳಲ್ಲೂ, ಸಭೆ ಸಮ್ಮೇಳನಗಳಲ್ಲೂ ಕನ್ನಡಕ್ಕೆ ಪ್ರಾಮುಖ್ಯತೆ ಇರಬೇಕೆಂದು ಹೇಳಿದ ಶ್ರೀ ಮಾಸ್ತಿಯವರ ಮಾತನ್ನು ನಾವು ಸಂಪೂರ್ಣವಾಗಿ ಅನುಮೋದಿಸುತ್ತೇವೆ. ಜನರಿಗೆ ಜವಾಬ್ದಾರಿ ಸರ್ಕಾರ ದೊರಕಿರುವಾಗ ಅವರ ಭಾಷೆಯಲ್ಲಿಯೇ ಸರ್ಕಾರದ ವ್ಯವಹಾರ ನಡೆಯುವುದು ಯಾವ ದೃಷ್ಟಿಯಿಂದ ನೋಡಿದರೂ ಸಮಂಜಸವಾದ ವಿಚಾರ. ಇದರಿಂದಲೇ ದೇಶಭಾಷೆಗಳ ಉದ್ಧಾರ ನಿಜಕ್ಕೂ ಸಾಧ್ಯವೆಂಬುದನ್ನು ಹೇಳುವುದೇ ಬೇಡ.

ಕರ್ಣಾಟಕವು ಗತವೈಭವದ ರಾಜ್ಯ. ಕನ್ನಡ ಸಾಹಿತ್ಯದ ಚರಿತ್ರೆಯನ್ನು ಅವಲೋಕಿಸಿದರೆ ನಮ್ಮ ನಾಡು ವಿದ್ವಾಂಸರು ಕವಿಗಳು, ಪ್ರತಿಭಾಶಾಲಿಗಳು, ದಾರ್ಶನಿಕರು, ಕಲಾವಿದರು, ಅನುಭಾವಿಗಳು ಇವರಿಗೆಲ್ಲ ಜನ್ಮವಿತ್ತ ಪ್ರದೇಶವೆಂಬುದು ಸ್ಪಷ್ಟವಾಗಿರುತ್ತದೆ.

ಶಿವಮೊಗ್ಗಾ ಜಿಲ್ಲೆಯ **ಬಳ್ಳಿಗಾವಿ,** ಬಿಜಾಪೂರ ಜಿಲ್ಲೆಯ **ಐಹೊಳೆ,** ಬೀದರ ಜಿಲ್ಲೆಯ **ಕಲ್ಯಾಣ,** ಹಾಸನ ಜಿಲ್ಲೆಯ **ಹಳೇಬೀಡು,** ಮೈಸೂರ ಜಿಲ್ಲೆಯ **ತಲಕಾಡು,** ಬಳ್ಳಾರಿ ಜಿಲ್ಲೆಯ **ಹಂಪೆ** ಇವು ಕರ್ಣಾಟಕದ ಪ್ರಾಚೀನ ವಿದ್ಯಾಕೇಂದ್ರಗಳು, ವಿಶ್ವವಿದ್ಯಾನಿಲಯಕ್ಕೆ ಸಮನಾದ ದಿವ್ಯ ಸ್ಥಳಗಳೆಂದು ಹೇಳಿದರೆ ತಪ್ಪಲ್ಲ. ಇಂತಹ ಪ್ರಾಚೀನ ಪರಂಪರೆಯುಳ್ಳ ವಿಶಾಲ ಕರ್ಣಾಟಕಕ್ಕೆ ಮೈಸೂರು ಮತ್ತು ಕರ್ಣಾಟಕ ಎರಡೂ ವಿಶ್ವವಿದ್ಯಾನಿಲಯಗಳು ಇರಬೇಕೆಂದು ಹೇಳುವ ಅಗತ್ಯವೇ ಇಲ್ಲ. ಕಾಲಕ್ರಮದಲ್ಲಿ ಮೂರನೆಯ ವಿಶ್ವವಿದ್ಯಾಲಯ ಕೂಡ ಆದೀತೆಂದು ನಮ್ಮ ಭಾವನೆ

ಮೇಲೆ ಕಂಡಂಥ ಉಪಯುಕ್ತವಾದ ವಿಷಯಗಳನ್ನು ಘಟಿಕೋತ್ಸವದಂತಹ ಮಹತ್ವದ ಸಮಯದಲ್ಲಿ ಧೈರ್ಯವಾಗಿ ಹೇಳಿ ಮಾನ್ಯ ಮಾಸ್ತಿಯವರು ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆಂದು ನಾವು ಹೇಳಬಯಸುತ್ತೇವೆ.



೧೯೦. ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ.ಸಾ.ಪ., ಬೆಂಗಳೂರು-೨—೧೨-೧೨-೧೯೫೬

## ವಿನಿಮಯ ಪತ್ರಿಕೆಗಳು

**Monthly** :—1. P.E.N. Bombay, 2. Journal of Mysore State Educational League, Bangalore. 3. Divine Life, Rishikesh. 4. Mysore Information Bulletin, Bangalore. 5. British Book News, London. 6. Monthly Bulletin of Tirumalai-Tirupathi Devasthanam's Tirupathi. 7. Freedom First-Bombay. (8) The Indian Publisher and Book Seller-Bombay.

**ಮಾಸಪತ್ರಿಕೆ :**

(೧) ಸುಬೋಧ-ಬೆಂಗಳೂರು. (೨) ಜೀವನ-ಬೆಂಗಳೂರು. (೩) ಶರಣಸಾಹಿತ್ಯ-ಬೆಂಗಳೂರು. (೪) ಕತೆಗಾರ-ಬೆಂಗಳೂರು. (೫) ಕೊರವಂಜಿ-ಬೆಂಗಳೂರು. (೬) ಮಕ್ಕಳ ಪುಸ್ತಕ-ಬೆಂಗಳೂರು. (೭) ಗ್ರಾಮಾಭ್ಯುದಯ-ಬೆಂಗಳೂರು. (೮) ಮೈಸೂರು ವ್ಯವಸಾಯ ಶೋಧನ ಪತ್ರಿಕೆ-ಬೆಂಗಳೂರು. (೯) ಗಾನವಾಹಿನಿ-ಮಂಡ್ಯ. (೧೦) ವಿನೋದ-ಬೆಂಗಳೂರು. (೧೧) ವಿಮಾವಾಣಿಜ್ಯ-ಬೆಂಗಳೂರು. ೧೨) ಜಯಂತಿ-ಧಾರವಾಡ. (೧೩) ಜಯಕರ್ನಾಟಕ-ಧಾರವಾಡ. (೧೪) ಶಿಕ್ಷಕಮಿತ್ರ-ಬೆಳಗಾಂವಿ. (೧೫) ಮಧುರವಾಣಿ- ಬೆಳಗಾಂವಿ. (೧೬) ಶಿವಾನುಭವ-ಬಿಜಾಪುರ. (೧೭) ಧನ್ವಂತರಿ-ಬಿಜಾಪುರ. (೧೮) ಆರ್ಯವೈದ್ಯ-ಹುಬ್ಬಳ್ಳಿ. (೧೯) ಅಧ್ಯಾತ್ಮಪ್ರಕಾಶ-ಹೊಳೇನರಸೀಪುರ. (೨೦) ಚಂದಮಾಮ-ಮದರಾಸು. (೨೧) ಮೊಗವೀರ-ಬೊಂಬಾಯಿ. (೨೨) ಸದ್ಧರ್ಮದೀಪಿಕೆ-ಮೈಸೂರು. (೨೩) ದಿವ್ಯಜ್ಯೋತಿ-ಮೈಸೂರು. (೨೪) ವಿದ್ಯಾದಾಯಿನಿ-ಮೈಸೂರು. (೨೫) ಪುಸ್ತಕ ಪ್ರಪಂಚ-ಮೈಸೂರು. (೨೬) ನಗುವ ನಂದ-ಬೆಂಗಳೂರು. (೨೭) ವಿವೇಕಾಭ್ಯುದಯ-ಮಂಗಳೂರು. (೨೮) ಯುಗಪುರುಷ-ಕಿನ್ನಿಗೋಳಿ (ಉ.ಕ.) (೨೯) ಧರ್ಮಬೋಧ-ಉಡುಪಿ. (೩೦) ಅಮರವಾಣಿ-ಯಾದಗಿರಿ. (೩೧) ಸುಕುಮಾರ-ಬಾದಾಮಿ (೩೨) ವೀಣ-ಶಿರವ. (೩೩) ಜಿನವಿಜಯ-ಬೆಳಗಾಂವಿ. (೩೪) ಹರಿದಾಸ ಭಾರತೀ-ಬೆಂಗಳೂರು. (೩೫. ವಿಜಯಮಾಲಾ-ಬೆಂಗಳೂರು. (೩೬) ಪ್ರಕಾಶಿನೀ-ದ. ಕನ್ನಡ. (೩೭) ರಾಮರಾಜ್ಯ-ಬೆಂಗಳೂರು. (೩೮) ಸೋದರಿ-ಬೆಂಗಳೂರು. (೩೯) ಪ್ರದೀಪ-ಧಾರವಾಡ. (೪೦) ಹಿಂದೀ ವಾಣಿ-ಬೆಂಗಳೂರು. (೪೧) ನಂದಾದೀಪ-ಮಡಕೇರಿ. (೪೨) ಸೇವಾ-ಬೆಳಗಾಂ. (೪೩) ನವಚೇತನಾ-ಪೇರಡಾಲ (ದ.ಕ.). (೪೪) ವೀರಮಾತಾ-ಧಾರವಾಡ. (೪೫) ಮಕ್ಕಳ ಬಾವುಟ-ಬೆಂಗಳೂರು.

**Bi-Monthly** :—1. Andhra Sahitya Parishat Patrika, Cocinada. 2. Journal of University of Bombay, Bombay. 3. Public Affairs-Bangalore.

**Quarterly** :—1. Journal of Mythic Society, Bangalore. 2. Journal of Annamalai University, Annamalai Nagar. 3. Journal of Indian History-Trivandrum. 4. Bulletin of the Deccan College Research Institute, Poona. 5. United States Quarterly Book Review, U.S A. 6. Journal of the University of Bombay, Bombay. 7. Journal of the Andhra Historical Research Society. 8. Journal of the K. R. Cama Oriental Research Institute. 9. Annals of Bhandarkar Oriental Research Institute. 10. Journal of the Oriental Institute M. S. University of Baroda. 11. The Pacific Spectator-California. 12. The Far Eastern Quarterly-California. 13. Bulletin of the School of Oriental and African Studies-London.

**ತ್ರೈಮಾಸಿಕ ಪತ್ರಿಕೆ:**

(೧) ಮೈಸೂರು ಸಕ್ಕರೆ-ಮಂಡ್ಯ. (೨) ಪ್ರಬುದ್ಧ ಕರ್ನಾಟಕ-ಮೈಸೂರು. (೩) ಕನ್ನಡ ಗುಡಿ-ಬೊಂಬಾಯಿ.

**Half Yearly**:—1. Half-Yearly Journal of the Mysore University, Mysore.

**Miscellaneous** :—Journal of Sri Venkatesha Oriental Institute, Tirupathi. 2. Archaeological Report of the Govt. of India 3. Archaeological Report of the Govt. of Mysore. 4. Publication of the Kannada Research Institute Dharwar. (5) ಪತ್ರಿಕೋದ್ಯೋಗಿ-ಮೈಸೂರು

# ಕನ್ನಡ ಸಾಹಿತ್ಯ ಪರಿಷತ್ತು

**ಚಾಮರಾಜಪೇಟೆ — — ಬೆಂಗಳೂರು 2**

## ಪರಿಷತ್ತಿನ ಪ್ರಕಟನೆಗಳು

| | | | | |
|---|---|---|---|---|
| ೧. | ಕನ್ನಡ ಬಾವುಟ (ನಾಲ್ಕನೆಯ ಮುದ್ರಣ) .... .... | ೨ | ೦ | ೦ |
| ೨. | ಪಂಪ ಭಾರತದ ಕಥೆ (ವಚನ) .... .... | ೧ | ೪ | ೦ |
| ೩. | ಪಂಪ ಭಾರತದ ನಿಘಂಟು .... .... | ೧ | ೦ | ೦ |
| ೪. | ಪಂಪ ರಾಮಾಯಣದ ಕಥೆ (ವಚನ) .... .... | ೦ | ೧೨ | ೦ |
| ೫. | ಪಂಪ ರಾಮಾಯಣದ ನಿಘಂಟು .... .... | ೦ | ೮ | ೦ |
| ೬. | ಸೀತಾ ಪರಿತ್ಯಾಗ (ಜೈಮಿನಿ ಭಾರತದಿಂದ) .... .... | ೦ | ೧೨ | ೬ |
| ೭. | ಜೇಮ್ಸ್ ಏಬ್ರಹಾಮ್ ಗಾರ್ಫೀಲ್ಡನ ಚರಿತ್ರೆ : ಕ್ಯಾಲಿಕೋ ಪ್ರತಿ | ೧ | ೮ | ೦ |
| | (ನಾಲ್ಕನೆಯ ಮುದ್ರಣ) ಸಾದಾ ಪ್ರತಿ | ೧ | ೦ | ೦ |
| ೮. | ಜ್ಯೋತಿರ್ವಿನೋದಿನಿ .... .... .... | ೨ | ೦ | ೦ |
| ೯. | ಹೂಮಾಲೆ .... .... .... | ೦ | ೧೦ | ೦ |
| ೧೦. | ಕನ್ನಡ ನಾಡಿನ ಚರಿತ್ರೆ : ಭಾಗ ೧ (ಮೂರನೆಯ ಮುದ್ರಣ) .... | ೧ | ೮ | ೦ |
| | ಭಾಗ ೩ .... .... | ೧ | ೦ | ೦ |
| ೧೧. | ಜೈಮಿನಿ ಭಾರತದ ಕನ್ನಡ ಗದ್ಯಾನುವಾದ (ಅಶ್ವಮೇಧಿಕ ಪರ್ವ) | ೨ | ೪ | ೦ |
| ೧೨. | ಸರ್ವೋದಯ .... .... | ೦ | ೫ | ೦ |
| ೧೩. | ಸೋಮೇಶ್ವರಶತಕ (ಮೂರನೆಯ ಮುದ್ರಣ) .... .... | ೧ | ೪ | ೦ |
| ೧೪ | ಸಂಕಲನ .... .... .... | ೦ | ೧೦ | ೦ |
| ೧೫ | ಕನ್ನಡದಲ್ಲಿ ಸುಧಾರಣೆಗಳು .... .... .... | ೦ | ೬ | ೦ |
| ೧೬ | ಅರುಂಧತಿ .... .... .... | ೦ | ೪ | ೦ |
| ೧೭. | ಚಂದ್ರಹಾಸೋಪಾಖ್ಯಾನ .... .... ... | ೦ | ೧೨ | ೦ |
| ೧೮. | ದೂತವಾಕ್ಯ ... .... ... | ೦ | ೪ | ೦ |
| ೧೯. | ಶಿವಶರಣರ ಕೃತಿಗಳು (ಸ್ವರಪ್ರಸ್ತಾರ ಸಹಿತ) .... .... | ೨ | ೦ | ೦ |
| ೨೦. | ಹರಿದಾಸ ಸಾಹಿತ್ಯ – ಇಂಗ್ಲಿಷ್ ಉಪೋದ್ಘಾತದೊಡನೆ .... | ೧೦ | ೦ | ೦ |
| | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ .... | ೮ | ೦ | ೦ |
| ೨೧. | ಗಾಳಿಯಲ್ಲಿನ ಅಗೋಚರ ಶತ್ರುಗಳು .... .... | ೧ | ೪ | ೦ |
| ೨೨. | ನಕ್ಷತ್ರ ದರ್ಶನ .... .... .... | ೧ | ೮ | ೦ |
| ೨೩. | ಹರಿದಾಸ ಕೃತಿಮಂಜರಿ .... .... .... | ೧ | ೪ | ೦ |
| ೨೪. | ಪ್ಲೇಟೋವಿನ ಆದರ್ಶರಾಜ್ಯ .... .... | ೧ | ೬ | ೦ |
| ೨೫. | ವಾಚನ ಕಾವ್ಯಮಂಜರಿ .... .... .... | ೦ | ೩ | ೦ |
| ೨೬. | ಚೇರಮ ಕಾವ್ಯಂ .... .... .... | ೨ | ೦ | ೦ |
| ೨೭. | ಅನುಭವ ಮುಕುರಂ .... .... .... | ೦ | ೬ | ೦ |

ವಿ. ಸೂ.–ಪ್ರತಿಗಳು ಮುಗಿದಿವೆ: ಪಂಪರಾಮಾಯಣ (೪ನೆಯ ಅಶ್ವಾಸ), ತೊರವೆಯ ರಾಮಾಯಣ (ಬಾಲಕಾಂಡ ಸಂಧಿ ೧೩–೧೬), ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ), ಹರಿಶ್ಚಂದ್ರನ ರಾಜ್ಯ ಸಮರ್ಪಣ, ವಡ್ಡಾರಾಧನೆ, ಕನ್ನಡ ನಾಡಿನ ಚರಿತ್ರೆ ೨ನೆಯ ಭಾಗ, ಕುಮಾರವ್ಯಾಸ ದರ್ಶನ, ಕವಿಜಿಹ್ವಾಬಂಧನ.

**ತಾ|| 1–7–56 ಮತ್ತು 2–7–56ರಲ್ಲಿ ಸೇರಿದ್ದ ಕಾರ್ಯಕಾರಿ ಸಮಿತಿಯ ತೀರ್ಮಾನದಂತೆ ಇದೇ ಜುಲೈ 5ನೆಯ ತಾರೀಖಿನಿಂದ ಪುಸ್ತಕ ವ್ಯಾಪಾರಿಗಳಿಗೆ ಸೇ. 25ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.**

ಬಿ. ಎಂ. ಶ್ರೀಕಂಠಯ್ಯ, ಅಧ್ಯಕ್ಷರು, ಕ. ಸಾ. ಪ., ಬೆಂಗಳೂರು-೨